# ವಾನರಿ

ತಿಂಗಳ ಪತ್ರಿಕೆ

ಸೆಪ್ಟೆಂಬರ್ : 1998

- ಕಲ್ಪನೆಯ ಕೊನೆ
- ಸ್ಥಳಾಂತರದ ನೋವು, ದುಮ್ಮಾನಗಳು
- ಗಿರಿಜನ ಮಹಿಳೆಯರ ಹೋರಾಟ
- ಜಗತ್ತಿನ ನೊಬೆಲ್ ಪ್ರಶಸ್ತಿ ವಿಜೇತೆಯರು

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 13 ಸಂಚಿಕೆ : 8

ಸೆಪ್ಟೆಂಬರ್ : 1998





ವಿಳಾಸ
"ಮಾನಸ" ತಿಂಗಳ ಪತ್ರಿಕೆ
ಪಂಚಾಯಿತಿ ರಸ್ತೆ
ಕಾಡುಗೋಡಿ ಪೋಸ್ಟ್
ಬೆಂಗಳೂರು - 560 067



ಸೂಚನೆ : ಬಿಡಿ ಪ್ರತಿ **3-00** ರೂ.
ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ
ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ......**






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ
ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಕಲ್ಪನೆಯ ಕೊನೆ

- ಅರುಂಧತಿ ರಾಯ್

ಮೇ 1998 - ಇತಿಹಾಸದ ಪುಟ ಸೇರಲಿದೆ, ಇತಿಹಾಸದ ಪುಸ್ತಕಗಳಿರುವುದಾದರೆ, ಭವಿಷ್ಯವಿರುವುದಾದರೆ, ಅಣ್ವಸ್ತ್ರಗಳ ಬಗ್ಗೆ ಹೊಸದಾಗಿ ಹೇಳುವುದೇನೂ ಇಲ್ಲ.

ಬಿದ್ದು ಹೊರಳಾಡಲು ನಾನು ಸಿದ್ಧ. ನನ್ನನ್ನೆ ನಾನು ಅಪಮಾನಿಸಿಕೊಳ್ಳಲು ಸಿದ್ಧ. ಕಾರಣ ಈ ಸಮಯದಲ್ಲಿ ಮೌನ-ರಕ್ಷಣೆಗೆ ಬರುವುದಿಲ್ಲ. ನೀವು ಸಿದ್ಧರಾಗಿದ್ದರೆ ನಮ್ಮ ನಮ್ಮ ಪಾತ್ರಗಳನ್ನು ಹೆಕ್ಕಿ ತ್ಯಜಿಸಿರುವ ನಮ್ಮ ಪೋಷಾಕುಗಳನ್ನು ತೊಟ್ಟು ಈ ನಿರಾಸೆಯ ಎರಡನೇ ದರ್ಜೆ ನಾಟಕದಲ್ಲಿ ಎರಡನೆ ದರ್ಜೆ ಸಾಲುಗಳನ್ನು ಹೇಳೋಣ. ಆದರೆ ಯಾವುದಕ್ಕಾಗಿ ಈ ಜೂಜನ್ನು ಆಡಲು ಹೊರಟಿದ್ದೇವೆಯೋ ಅದು ಬೃಹತ್ತಾದುದು. ಸುಸ್ತಾದರೆ ಅದು ನಮ್ಮ ಕೊನೆಯಾದಂತೆ. ನಮ್ಮ ಮಕ್ಕಳ ಮಕ್ಕಳ ಮಕ್ಕಳ ಕೊನೆಯಾದಂತೆ. ನಮ್ಮೊಳಗಿನ ನಮ್ಮನ್ನು ತಲುಪಿ ಯೋಚಿಸುವ, ಹೋರಾಡುವ ಶಕ್ತಿಯನ್ನು ಪಡೆದುಕೊಳ್ಳಬೇಕು.

ಮತ್ತೊಮ್ಮೆ ನಾವು ಕರುಣಾಜನಕವಾಗಿ ಹಿಂದೆ ಬಿದ್ದಿದ್ದೇವೆ. ವೈಜ್ಞಾನಿಕವಾಗಿ, ತಂತ್ರಜ್ಞತೆಯಲ್ಲಷ್ಟೆ ಅಲ್ಲ, ಅಣ್ವಸ್ತ್ರಗಳ ನಿಜರೂಪವನ್ನು ಅರಿತುಕೊಳ್ಳುವ ಶಕ್ತಿಯಲ್ಲೂ ಹಿಂದೆ ಬಿದ್ದಿದ್ದೇವೆ. ನಮ್ಮ ಭಯಾನಕ ಇಲಾಖೆಯ ಗ್ರಹಿಕೆ ಹಳಸಲಾಗಿದೆ. ಇಲ್ಲಿ ನಾವೆಲ್ಲ ಭಾರತ ಮತ್ತು ಪಾಕಿಸ್ತಾನದಲ್ಲಿ ಹೊಸ ರಾಜಕೀಯ ಅಂಶಗಳನ್ನು, ವಿದೇಶಿ ನೀತಿಯನ್ನು ಚರ್ಚಿಸುತ್ತಾ, ನಮ್ಮ ಸರ್ಕಾರಗಳು ಹೊಸ, ದೊಡ್ಡ ಬಾಂಬ್ ಒಂದು ತರ ಮಹತ್ತರವಾದ ಕೈಬಾಂಬ್ ಮಾಡಿ ವೈರಿಯನ್ನು (ಒಬ್ಬರನ್ನೊಬ್ಬರು) ನಿರ್ನಾಮ ಮಾಡಿ ಎಲ್ಲಾ ಅಪಾಯ ಗಳಿಂದಲೂ ನಮ್ಮನ್ನು ರಕ್ಷಿಸಿಕೊಳ್ಳಬಲ್ಲವೆಂದು ಜಗತ್ತಿನೆದುರು ತೋರಿಸಿಕೊಳ್ಳುತ್ತಿದ್ದೇವೆ. ಅಸಾಧ್ಯವಾಗಿ ಅದನ್ನು ನಂಬುತ್ತಿದ್ದೇವೆ.

ಅಣು ಯುದ್ಧ ಮತ್ತೊಂದು ಮಾಮೂಲಿ ಯುದ್ಧವಾಗಿದ್ದರೆ, ಯುದ್ಧ, ರಾಷ್ಟ್ರ, ಗಡಿ, ದೇವರು, ಇತಿಹಾಸಗಳಂತಹ ರೂಢಿಗತ ವಿಷಯದ ಬಗ್ಗೆ ಆಗಿದ್ದರೆ, ಅಣುಯುದ್ಧ ರಾಷ್ಟ್ರ ರಾಷ್ಟ್ರದೊಂದಿಗೆ, ಮನುಷ್ಯ ಮನುಷ್ಯ ನೊಂದಿಗೆ ಮಾಡುವ ಯುದ್ಧವಾಗಿದ್ದರೆ ಚಿಂತಿಸಬೇಕಾಗಿರಲಿಲ್ಲ. ಅಣುಯುದ್ಧವೇನಾದರು ಆದಲ್ಲಿ ಶತ್ರು ಅಮೇರಿಕಾ, ಚೈನಾ ಅಲ್ಲ. ಶತ್ರು ನಮ್ಮ ಭೂಮಿ! ಮೂಲವಸ್ತುಗಳಾದ ಆಕಾಶ, ಗಾಳಿ, ನೀರು, ನೆಲ ಎಲ್ಲವು ನಮ್ಮ ವಿರುದ್ಧ ನಿಲ್ಲುತ್ತವೆ. ಅವುಗಳ ಕೋಪ ಭಯಾನಕ.

ನಮ್ಮ ನಗರಗಳು, ಕಾಡುಗಳು, ನೆಲ, ಹಳ್ಳಿಗಳು ಅನೇಕ ನದಿಗಳು ಉರಿಯುತ್ತವೆ. ನದಿಗಳು ವಿಷವಾಗಿ, ಗಾಳಿ ಬೆಂಕಿಯಾಗಿ ಎಲ್ಲೆಡೆ ಉರಿ ಅಲೆ ಹಬ್ಬಿಸುತ್ತದೆ. ಉರಿಯುವುದೆಲ್ಲವೂ ಉರಿದು, ಬೆಂಕಿ ನಂದಿ ಹೊಗೆ ಮೇಲೆದ್ದು ಸೂರ್ಯನನ್ನು ಮುಚ್ಚಿ ಬಿಡುತ್ತದೆ. ಭೂಮಿ ಕಗ್ಗತ್ತಲಿನಲ್ಲಿ ಉಡುಗಿ ಹೋಗುತ್ತದೆ. ಬೆಳಕೆ ಇಲ್ಲದ ಕೊನೆಯಾಗದ ರಾತ್ರಿ, ಉಷ್ಣಾಂಶ ಸಂಪೂರ್ಣ ಕೆಳಗಿಳಿದು ಅಣು ಥಂಡಿ ಶುರುವಾಗುತ್ತದೆ. ನೀರು ವಿಷಪೂರಿತ ಹಿಮವಾಗಿ, ಅಣುವಿಕಿರಣ ಭೂಮಿಯೊಳಗಿಳಿದು ಭೂಮಿಯೊಳಗಿನ ನೀರನ್ನು ಕಲುಷಿತಗೊಳಿಸುತ್ತವೆ. ಎಲ್ಲಾ ಜೀವ ಜಂತುಗಳು, ಪ್ರಾಣಿಗಳು, ತರಕಾರಿ, ಮೀನು, ಕೊಳೆತು ಹೋಗುತ್ತವೆ. ಇಲಿ ಮತ್ತು ಜಿರಳೆಗಳು ವೃದ್ಧಿಗೊಂಡು ಅಳಿದುಳಿದ ಕೊಳೆತ ಜೀವಿಗಳ ಮೇವಿಗೆ ಸ್ಪರ್ಧಿಸುತ್ತವೆ.

ಆಗೇನು ಮಾಡಬೇಕು! ಇನ್ನೂ ಬದುಕಿ ಉರಿದು ಬೋಡಾಗಿ, ಕುರುಡಾಗಿ ಕೈಯಲ್ಲಿ ನಮ್ಮ ಮಕ್ಕಳ ಹೆಣ ಹಿಡಿದವರು ನಾವೆಲ್ಲಿಗೆ ಹೋಗಬೇಕು? ನಾವೇನು ತಿನ್ನಬೇಕು? ಏನು ಕುಡಿಯಬೇಕು? ಏನನ್ನು ಉಸಿರಾಡಬೇಕು?

ಬಾಂಬೆಯ ಬಾಭಾ ಅಣುಶಕ್ತಿ ಸಂಶೋಧನಾ ಕೇಂದ್ರದ ಆರೋಗ್ಯ, ಪರಿಸರ ಮತ್ತು ಸುರಕ್ಷಾ ವಿಭಾಗದ ಮುಖ್ಯಸ್ಥರ ಬಳಿ ಯೋಜನೆಯೊಂದಿದೆ. ಸಂದರ್ಶನವೊಂದರಲ್ಲಿ (1998 ಏಪ್ರಿಲ್ 24ರ ಪಯೋನಿರ್ ಪತ್ರಿಕೆಯಲ್ಲಿ) ಅವರು ಭಾರತ ಅಣುಯುದ್ಧದಿಂದ ಬದುಕುಳಿಯಬಹುದೆಂದು ಘೋಷಿಸಿದ್ದಾರೆ. ಅಣುಸ್ಥಾವರದ ಬಳಿ ಅಪಘಾತವಾದಾಗ ವಿಜ್ಞಾನಿಗಳು ಸೂಚಿಸಿರುವ ಸುರಕ್ಷಾ ಕ್ರಮಗಳನ್ನೆ ಅಣು ಯುದ್ಧವಾದಾಗ ತೆಗೆದುಕೊಳ್ಳಬೇಕು. ಅಂದರೆ ಅಯೋಡಿನ್ ಮಾತ್ರೆಗಳನ್ನು ತೆಗೆದುಕೊಳ್ಳಬೇಕೆಂದು ಹೇಳಿದ್ದಾರೆ. ಉಳಿದ ಕ್ರಮಗಳೆಂದರೆ ಮನೆಯೊಳಗೆ ಇರುವುದು, ಶೇಖರಿಸಿಟ್ಟ ನೀರು ಕುಡಿಯುವುದು ಮತ್ತು ಹಾಲು ಕುಡಿಯುವುದನ್ನು ತಪ್ಪಿಸಬೇಕು. ಮಕ್ಕಳಿಗೆ ಹಾಲಿನ ಪುಡಿಯಿಂದ ಮಾಡಿದ ಹಾಲನ್ನು ನೀಡಬೇಕು. "ಅಪಾಯದ

ವಲಯದಲ್ಲಿರುವವರು ತಕ್ಷಣವೆ ಕೆಳ ಮಹಡಿಗೆ ಅಥವಾ ತಳಭಾಗಕ್ಕೆ ಹೋಗಬೇಕು".

ಈ ಮಟ್ಟದ ಹುಚ್ಚಾಟಕ್ಕೆ ಏನು ಮಾಡಬೇಕು? ಅಪಾಯಕಾರಿ ಹುಚ್ಚು ವೈದ್ಯರುಗಳಿರುವ ಹುಚ್ಚಾಸ್ಪತ್ರೆಯಲ್ಲಿ ಸಿಕ್ಕಿಹಾಕಿಕೊಂಡಾಗ ಏನು ಮಾಡಬೇಕು? ಆ ಮಟ್ಟಕ್ಕೆ ಹೋಗುವುದೇ ಇಲ್ಲ ಎನ್ನುತ್ತಾರವರು. ಯುದ್ಧವಾಗುವುದಿಲ್ಲ. ಅಣ್ವಸ್ತ್ರಗಳಿರುವುದು ಶಾಂತಿಗಾಗಿ, ಯುದ್ಧಕ್ಕಾಗಿ ಅಲ್ಲ. ಹಿಮ್ಮೆಟ್ಟಿಸುವಿಕೆ (Detterence) ಎಂಬ ತಮ್ಮನ್ನು ತಾವು ಗಿಡುಗಗಳೆಂದುಕೊಂಡಿರುವವರ ಝೇಂಕಾರವಾಗಿದೆ. (ಗಿಡುಗಗಳು ಚೆನ್ನಾದ ಬೆಡಗಿನ, ಮಾಂಸಾಹಾರಿಗಳು. ಪಾಪ ಯುದ್ಧದ ನಂತರ ಇರಲಾರವು. ನಾವು ನಾಶ ಎಂಬ ಪದ ಉಪಯೋಗಿಸುವುದನ್ನು ಅಭ್ಯಾಸ ಮಾಡಿಕೊಳ್ಳಬೇಕು). ಹಿಮ್ಮೆಟ್ಟಿಸುವಿಕೆ ಹಳಸಲು ಥಿಯರಿ, ಅದಕ್ಕೆ ಪುನರ್ ಜನ್ಮ ನೀಡಿ ಲೋಕಲ್ (local) ವಾಸನೆ ನೀಡಲಾಗಿದೆ. ಈ ಸಿದ್ಧಾಂತದಲ್ಲಿ ಮೂಲಭೂತ ದೋಷಗಳಿವೆ. ಮೊದಲ ದೋಷವೆಂದರೆ ಶತ್ರುವಿನ ಮನಶಾಸ್ತ್ರವನ್ನು ಸಂಪೂರ್ಣವಾಗಿ ಕುಶಾಲಾಗ್ರವಾಗಿ ಅರ್ಥಮಾಡಿಕೊಂಡಿರುವೆವೆಂಬ ಭಾವನೆ. ನಮಗೆ ಯಾವುದು ಬೆದರಿಕೆ ಹುಟ್ಟಿಸುತ್ತದೆಯೋ ಅದು ಶತ್ರುವನ್ನು ಬೆದರಿಸುತ್ತದೆ ಎಂಬ ಭಾವನೆ. ಆದರೆ ಅದರಿಂದ ಭಯಗೊಳ್ಳದಿರುವವರನ್ನು ಹೇಗೆ ಪರಿಗಣಿಸುತ್ತದೆ? ಮಡಿಲಲ್ಲಿ ಬಾಂಬ್ ಕಟ್ಟಿಕೊಂಡು ಸಿಡಿಸಲು ಸಿದ್ಧರಾಗುವವರನ್ನು ಹೇಗೆ ನೋಡಬೇಕು? ರಾಜೀವ್‌ಗಾಂಧಿ ಸತ್ತದ್ದು ಹೇಗೆ? ಇಲ್ಲಿ ನಾವು ಅಂದರೆ ಯಾರು? ಶತ್ರುವೆಂದರೆ ಯಾರು? ಅವರೆಡು ಸರ್ಕಾರಗಳೇ. ಸರ್ಕಾರಗಳು ಬದಲಾಗುತ್ತವೆ. ಅವರು ಮುಖವಾಡದೊಳಗೆ ಮುಖವಾಡ ಧರಿಸುವಂತಹವರು. ವೇಷ ಕಳಚಿಕೊಳ್ಳುತ್ತಾ ಎಲ್ಲಾ ಕಾಲವು ಮರುವೇಷವನ್ನು ಹುಡುಕುತ್ತಿರುತ್ತಾರೆ.

ಎರಡನೆ ದೋಷವೆಂದರೆ ಹಿಮ್ಮೆಟ್ಟಿಸುವಿಕೆ ಭೀತಿಯನ್ನು ಆಧರಿಸಿದೆ. ಭೀತಿ ಜ್ಞಾನವನ್ನು ಆಧರಿಸಿದೆ. ಅಣುಯುದ್ಧ ಉಂಟು ಮಾಡುವ ಹಾನಿಯ ನಿಜವಾದ ತಿಳುವಳಿಕೆಯನ್ನಾಧರಿಸಿದೆ. ಬಾಂಬ್ ಪವಾಡ ಮಾಡಿ ಶಾಂತಿಯನ್ನು ಹುಟ್ಟುಹಾಕುವ ನಿಗೂಢ ವಸ್ತುವಲ್ಲ. ಅನೇಕ ಜನರು ನಿರಂತರವಾಗಿ ಹೋರಾಡಿ ಧೈರ್ಯವಾಗಿ ಬಾಂಬ್ ಅನ್ನು ವಿರೋಧಿಸಿದ್ದಾರೆ. ಸಿನಿಮಾ, ಮೋರ್ಚ, ಲೇಖನಗಳ ಮೂಲಕ ಬಾಂಬ್ ವಿರೋಧಿಸಿದ್ದರಿಂದಲೆ ಅಣುಯುದ್ಧವನ್ನು ಮುಂದೂಡಿರುವುದು. ಹೆದರಿ ಕೂತಿದ್ದರೆ ಎಂದೊ ಅಣುಯುದ್ಧವಾಗಿರುತ್ತಿತ್ತು. ಹಿಮ್ಮೆಟ್ಟಿಸುವಿಕೆ ಅನಕ್ಷರತೆ, ಮೌಢ್ಯಕ್ಕೆ ಉತ್ತರವಾಗುವುದಿಲ್ಲ. ಪೋಕ್ರಾನ್ ಅಣುವಿಕಿರಣದ ಮಣ್ಣನ್ನು ಪವಿತ್ರವೆಂದು ದೇಶಾದ್ಯಂತ ಹಂಚಲು ಯಾತ್ರೆ (ಕ್ಯಾನ್ಸರ್ ಯಾತ್ರೆ?) ಹೋಗುವವರ ಮೌಢ್ಯಕ್ಕೆ ಏನನ್ನಬೇಕು. ಅಣುವಿಕಿರಣಕ್ಕೆ ಅಯೋಡಿನ್ ಮಾತ್ರ ಸೂಚಿಸುವ ನಾಡಿನಲ್ಲಿ ಹಿಮ್ಮೆಟ್ಟಿಸುವಿಕೆ ಒಂದು ಅಪಾಯಕಾರಿ ಜೋಕ್ ಅಷ್ಟೇ.

ಭಾರತ-ಪಾಕಿಸ್ತಾನ ಈಗ ಬಾಂಬ್ ಹೊಂದಿವೆ. ಯಾಕೆ ಬೇಕೆಂಬುದಕ್ಕೆ ಸಮರ್ಥನೆ ನೀಡಿವೆ. ಸ್ವಲ್ಪದರಲ್ಲೆ ಇಸ್ರೇಲ್, ಇರಾನ್, ಇರಾಕ್, ಸೌದಿ ಅರೇಬಿಯಾ, ನಾರ್ವೆ, ನೇಪಾಳ್, ಡೆನ್ಮಾರ್ಕ್, ಜರ್ಮನಿ, ಭೂತಾನ್, ಮೊರಾಕ್ಕೊ, ಲೆಬನಾನ್, ಶ್ರೀಲಂಕ, ಬರ್ಮಾ, ಬಾಸ್ನಿಯಾ, ಸಿಂಗಪೂರ್, ಉತ್ತರ ಕೊರಿಯಾ, ಸ್ವೀಡನ್, ದಕ್ಷಿಣ ಕೊರಿಯ, ವಿಯಾಟ್ನಾಂ, ಕ್ಯೂಬಾ, ಅಫ್‌ಘಾನಿಸ್ತಾನ, ಉಜ್‌ಬೇಕಿಸ್ತಾನ ಎಲ್ಲಾ ದೇಶಗಳಿಗೂ ಬಾಂಬ್ ಹೊಂದಲು ವಿಶೇಷ ಕಾರಣಗಳಿವೆ. ಎಲ್ಲರಿಗೂ ನಂಬಿಕೆಗಳಿವೆ. ನಮ್ಮ ಎಲ್ಲಾ ಮಾಂಸದ ಕಪಾಟುಗಳು ಹೊಳೆವ ಬಾಂಬ್‌ಗಳಿಂದ ತುಂಬಿರುವಾಗ ನಮ್ಮ ಹೊಟ್ಟೆ ಖಾಲಿ ಇರುವಾಗ ಊಟಕ್ಕಾಗಿ ಬಾಂಬ್‌ನ ವ್ಯಾಪಾರ ಮಾಡಬಹುದು. ಅಣುತಂತ್ರಜ್ಞಾನ ಮಾರುಕಟ್ಟೆಗೆ ಬಂದಾಗ, ಸ್ಪರ್ಧೆ ಜಾಸ್ತಿಯಾಗಿ ಬೆಲೆ ಇಳಿದಾಗ ಸರ್ಕಾರಗಳು ಮಾತ್ರವಲ್ಲ, ಬಾಂಬ್ ಕೊಳ್ಳಲು ಶಕ್ತರಾದವರು ತಮ್ಮದೆ ಸ್ವಂತ ಯುದ್ಧಾಸ್ತ್ರಗಳನ್ನು ಹೊಂದಬಹುದು. ಸುಂದರ ಯುದ್ಧಾಸ್ತ್ರಗಳಿಂದ ನಮ್ಮ ಗ್ರಹ ಮಿಂಚಬಹುದು. ಒಬ್ಬರನ್ನೊಬ್ಬರು ಬೆದರಿಸುತ್ತಾ ಥ್ರಿಲ್ ಅನುಭವಿಸಬಹುದು. ಇವೆಲ್ಲದಕ್ಕೆ ಯಾರನ್ನು ನಾವು ವಂದಿಸಬೇಕು? ಕಾರಣಕರ್ತರನ್ನು, ವಿಶ್ವದ ಮಾಲೀಕರುಗಳನ್ನು ವಂದಿಸಬೇಕು. ಅಮೆರಿಕ ಸಂಯುಕ್ತ ಸಂಸ್ಥಾನವನ್ನು? ಮಾನ್ಯರೆ, ಮಹಿಳೆಯರೆ ಎದ್ದೇಳಿ ಅವರಿಗೆ ತಲೆಬಾಗಿ, ಜಗತ್ತಿಗೆ ನೀವು ಮಾಡಿರುವುದಕ್ಕೆ ವಂದನೆಗಳು! ದಾರಿ ತೋರಿಸಿದ್ದಕ್ಕೆ, ಬದುಕಿನ ಅರ್ಥವನ್ನೆ ತಿರುಗಿಸಿದ್ದಕ್ಕೆ ವಂದನೆಗಳು. ಇನ್ನು ಮುಂದೆ ನಾವು ಸಾಯಲು ಅಲ್ಲ, ಬದುಕಲು ಹೆದರಬೇಕು.

ಅಣ್ವಸ್ತ್ರಗಳನ್ನು ಪ್ರಯೋಗಿಸಿದಾಗಲಷ್ಟೇ ಅವು ಅಪಾಯಕಾರಿ ಎಂಬುದು ಹುಚ್ಚುತನ. ಅಣ್ವಸ್ತ್ರಗಳು ನಮ್ಮ ಯೋಚನೆಯನ್ನು ಆಕ್ರಮಿಸಿ, ನಡವಳಿಕೆಯನ್ನೆ ನಿಯಂತ್ರಿಸುತ್ತವೆ. ಸಮಾಜವನ್ನು ನಿರ್ದೇಶಿಸಿ, ಕನಸುಗಳಿಗೆ ಸೂಚನೆ ನೀಡುತ್ತವೆ. ಅದು ಮಾಂಸ ನೇತು ಹಾಕುವ ಕೊಕ್ಕೆಯಂತೆ ಮಿದುಳಿನ ಬುಡದೊಳಗೆ ಹೂತುಕೊಂಡುಬಿಡುತ್ತವೆ. ಹುಚ್ಚನ್ನು ಹಬ್ಬಿಸುವ ಬಾಂಬ್‌ಗಳೇ ಅಂತಿಮ ವಸಾಹತುಶಾಹಿಗಳು. ಬಿಳಿಯನಿಗಿಂತ ಬಿಳಿಯದಾದ, ಹೃದಯ ಬಿಳುಚಿಸುವ ಬಾಂಬ್‌ಗಳು.

ಎಲ್ಲ ಗಂಡಸರು, ಹೆಂಗಸರು, ಚೈತನ್ಯ ತುಂಬಿದ ಮಕ್ಕಳಿಗೆ ನನಗೆ ಹೇಳಲಾಗುವುದು ಇಷ್ಟೇ. ನೀವು ಹಿಂದು, ಮುಸ್ಲಿಂ, ಕ್ರಿಶ್ಚಿಯನ್ ವೈಯಕ್ತಿಕವಾಗಿ ನೋಡಿ. ಅಣುಯುದ್ಧ ಒಂದು ಒಳ್ಳೆಯ ಅಂಶವೆಂದರೆ, ಮನುಷ್ಯ ಹಿಂದೆಂದು ಹೊಂದಿರದಿದ್ದ ಸಮಾನತೆಯುಳ್ಳ ವಿಷಯವದು. ಲೆಕ್ಕಾಚಾರ ಚುಕ್ತವಾಗುವ ದಿನ ನಿಮ್ಮ ಯೋಗ್ಯತಾ ಪತ್ರಗಳನ್ನು ಕೇಳಲಾಗುವುದಿಲ್ಲ, ಭೇದಭಾವವಿಲ್ಲದೆ ಸಮಾನವಾಗಿ ನಾಶ ಮಾಡುತ್ತವೆ. ಬಾಂಬ್ ನಿಮ್ಮ ಹಿತ್ತಲಲ್ಲಿಲ್ಲ, ನಿಮ್ಮ ಮೈಯೊಳಗಿದೆ. ನನ್ನ ಮೈಯೊಳಗಿದೆ. ನಮ್ಮ ಮೈಯೊಳಗೆ ಹಾಕಲು ಯಾರಿಗೂ, ಯಾವ ರಾಷ್ಟ್ರಕ್ಕೂ, ಯಾವ ಮನುಷ್ಯನಿಗೋ, ಯಾವ ದೇವರಿಗೂ ಅಧಿಕಾರವಿಲ್ಲ. ಈಗಾಗಲೆ ನಾವು ಅಣು ವಿಕಿರಣಕ್ಕೆ ಒಳಗಾಗಿದ್ದೇವೆ. ಯುದ್ಧವಿನ್ನು ಆರಂಭವೇ ಆಗಿಲ್ಲ. ಆದ್ದರಿಂದ ಎದ್ದು ನಿಂತು ಏನಾದರು ಹೇಳಿ. ಹಿಂದೆ ಅದನ್ನು ಹೇಳಿದ್ದರೂ ಹೇಳಿ ನಿಮ್ಮ ಪರವಾಗಿ ನೀವು ಮಾತನಾಡಿ. ತೀರಾ ವೈಯಕ್ತಿಕವಾಗಿ ತೆಗೆದುಕೊಳ್ಳಿ.

ಮೇ ಮೊದಲ ವಾರದಲ್ಲಿ ಬೇರೆ ದೇಶಕ್ಕೆ ಹೋಗಿದ್ದೆ. ಹಿಂತಿರುಗಿ ಬರುವ ಆಶೆಯಿಂದ. ಭಾರತ ಬಾಂಬ್ ಸಿಡಿಸಿದ ನಂತರ ಹಿಂತಿರುಗಿದೆ. ನಾನು ಮನೆ ಎಂದುಕೊಂಡಿದ್ದ/ ಅಂದುಕೊಳ್ಳುವ ನಾಡಿಗೆ. ಇಲ್ಲಿ ನೋಡಿದರೆ ಸತ್ತು ಹೋಗಿತ್ತು. ನಾನಂತು ಅಲ್ಲ. ಹೆಚ್ಚು ಅಮೂಲ್ಯವಾದುದೇನೋ ಸತ್ತು ಹೋಗಿತ್ತು. ಕೆಲಕಾಲ ನರಳಿದ ಜಗತ್ತು ಕೊನೆಯುಸಿರು ಎಳೆದಿತ್ತು. ಈಗ ಅದನ್ನು ಸುಡಲಾಗಿತ್ತು. ಗಾಳಿ ಅಸಹ್ಯಗೊಂಡು ದಟ್ಟವಾಗಿತ್ತು. ಬೀಸುವ ಗಾಳಿಯಲ್ಲಿದ್ದ ವಾಸನೆ.... ಹಾ! ಅನುಮಾನವೇ ಇಲ್ಲ ಅದು ಫ್ಯಾಸಿಸಂನ ಗಬ್ಬುನಾತ.

ದಿನೇ ದಿನೇ ಪತ್ರಿಕೆಗಳ ಸಂಪಾದಕೀಯಗಳು, ರೇಡಿಯೋ, ಟಿವಿ, ಎಂಟಿವಿ ನಂಬಬಹುದಾಗಿದ್ದಂತಹ ಪತ್ರಕರ್ತರು, ಚಿತ್ರಗಾರರು, ಲೇಖಕರು ಎಲ್ಲರೂ ಹುಯಿಲೆಬ್ಬಿಸುತ್ತಿದ್ದರು. "ಸ್ವಾಭಿಮಾನದ ಆಸ್ಫೋಟ", "ಮರು ಜೀವ ಪಡೆದ ದಾರಿ", "ಹೆಮ್ಮೆಯ ಕ್ಷಣ" ಎನ್ನುವ ಹೇಳಿಕೆಗಳು ಬಾಂಬ್ ಪರೀಕ್ಷೆಯ ನಂತರ ರಾರಾಜಿಸಿದವು. ನಾವು ಷಂಡರಲ್ಲವೆಂದು ಸಾಬೀತು ಪಡಿಸಿದ್ದೇವೆ ಎಂದು ಶಿವಸೇನೆಯ ಶ್ರೀ ಠಾಕ್ರೆ ಗುಡುಗಿದರು. ಬಾಂಬಿನ ಬಗ್ಗೆ ಮಾತಾಡುವಾಗಲೆಲ್ಲ ಜನರು ವಯಾಗ್ರ ಮಾತ್ರೆ (ವಯಾಗ್ರಾ ಇತರ ವಿಷಯಗಳೊಂದಿಗೆ ಸ್ಪರ್ಧಿಸಿ ಮೊದಲ ಪುಟದಲ್ಲಿ 2ನೇ ಸ್ಥಾನದಲ್ಲಿತ್ತು.)ಯನ್ನು ಉಲ್ಲೇಖಿಸುತ್ತಿದ್ದರು. ಪಾಕಿಸ್ತಾನ ಬಾಂಬ್ ಸ್ಫೋಟಿಸಿದ ನಂತರ ನಮ್ಮ ದೇಶದ ರಕ್ಷಣಾ ಮಂತ್ರಿಗಳು "ನಮ್ಮ ಶಕ್ತಿ, ವೀರ್ಯವಂತಿಗೆ ಹೆಚ್ಚಿನ ಶ್ರೇಷ್ಠತೆಯನ್ನು ಹೊಂದಿದೆ" ಎಂದು ಘೋಷಿಸಿದರು. ಇವು ಕೇವಲ ಅಣುಶಕ್ತಿ ಪರೀಕ್ಷೆಗಳಲ್ಲಿ ನಮ್ಮ ರಾಷ್ಟ್ರಾಭಿಮಾನದ ಪರೀಕ್ಷೆ ಎಂದು ಪದೇ ಪದೇ ಹೇಳಲಾಯ್ತು.

ಮತ್ತೆ ಮತ್ತೆ ಮನೆ, ಮನಗಳ ಮೇಲೆ ಗುದ್ದಿ ಹೇಳಲಾಯ್ತು, "ಬಾಂಬ್ ಎಂದರೆ ಭಾರತ, ಭಾರತವೆಂದರೆ ಬಾಂಬ್", "ಬರಿ ಭಾರತವಲ್ಲ, ಹಿಂದೂ ಭಾರತ". ಆದ್ದರಿಂದ ಯಾವ ಟೀಕೆಯಾಗಲಿ ಅದು ದೇಶ ವಿರೋಧಿಯಷ್ಟೇ ಅಲ್ಲ, ಹಿಂದೂ ವಿರೋಧಿ (ನಿಜ ಪಾಕಿಸ್ತಾನದ ಬಾಂಬ್ ಇಸ್ಲಾಂ ಬಾಂಬ್. ರಾಜಕೀಯವಾಗಿ ಒಂದೇ ಭೌತಶಾಸ್ತ್ರ ಎರಡೂ ಬಾಂಬ್‌ಗಳಿಗೆ ಅನ್ವಯಿಸಿದರೂ) ನಿಜಕ್ಕೂ ಬಾಂಬ್‌ನಿಂದ ಅನಿರೀಕ್ಷಿತ ಲಾಭ, ಶತ್ರುಗಳನ್ನು ಬೆದರಿಸುವುದಲ್ಲದೆ ತನ್ನದೇ ಜನರ ಮೇಲೂ ಯುದ್ಧ ಪ್ರಾರಂಭಿಸಬಹುದು.

ಮೊದಲ ಬಾರಿಗೆ ಅಣುಶಕ್ತಿ ಸಮರದಲ್ಲಿ ಹೆಜ್ಜೆರಳಿಟ್ಟ ಒಂದು ವರ್ಷದ ನಂತರ 1975ರಲ್ಲಿ ಇಂದಿರಾಗಾಂಧಿ ತುರ್ತು ಪರಿಸ್ಥಿತಿ ಹೇರಿದರು. 1999 ಏನನ್ನು ತರಬಹುದು. ದೇಶ ವಿರೋಧಿ ಚಟುವಟಿಕೆಗಳನ್ನು ನಿಯಂತ್ರಿಸಲು ಸೆಲ್ ಒಂದನ್ನು ಸ್ಥಾಪಿಸುವ, ದೇಶದ ಸಂಸ್ಕೃತಿಗೆ ಹಾನಿಕಾರಕವಾಗಿರುವ ನೆಟ್‌ವರ್ಕ್ ಚಾನೆಲ್‌ಗಳನ್ನು ಬ್ಯಾನ್ ಮಾಡಲು ಕೇಬಲ್ ಕಾಯ್ದೆಗಳನ್ನು ತಿದ್ದುಪಡಿ ಮಾಡುವ ಕುರಿತು ಮಾತು ಪ್ರಾರಂಭವಾಗಿದೆ. ಚರ್ಚ್‌ಗಳಲ್ಲಿ ವೈನ್ ಹಂಚುತ್ತಾರೆಂಬುದಕ್ಕೆ ಅವನ್ನು ಧಾರ್ಮಿಕ ಸ್ಥಳಗಳಲ್ಲವೆಂದು ಘೋಷಿಸಬೇಕು. (ಇಂಡಿಯನ್ ಎಕ್ಸ್‌ಪ್ರೆಸ್, ಜುಲೈ 3, ಟೈಮ್ಸ್ ಆಫ್ ಇಂಡಿಯಾ, ಜುಲೈ 4). ಕಲಾವಿದರು, ಲೇಖಕರು, ನಟರು, ಹಾಡುಗಾರರನ್ನು ಬೆದರಿಸಲಾಗುತ್ತಿದೆ. ಗೂಂಡಾಗಳ ಮೂಲಕವಲ್ಲ, ಸರ್ಕಾರಿ ಸಾಧನಗಳ ಮೂಲಕ. ಕಾಯ್ದೆಗಳ ಮೂಲಕ. ಇವೆಲ್ಲವೂ ತೀರಾ ಪರಿಚಿತವೆನಿಸುತ್ತಿದೆ. ಹಳೇ ಸಿನಿಮಾದ ಕಪ್ಪು ಬಿಳುಪು ಪಾತ್ರಗಳಂತೆ. ಜೀವ ಭಯದಿಂದ ಓಡುವ ಜನರನ್ನು ಸುತ್ತುಗಟ್ಟಿ ಕ್ಯಾಂಪಿನೊಳಗೆ ಓಡಿಸುವ ದೃಶ್ಯ ಸತ್ಯ ಕರಗಿ ಮೌನ ಕಣಿವೆಯೊಳಗೆ ಧುಮುಕಿದಂತೆ.

ಈ ಲೇಖನ ಬರೆಯುವ ಬಗ್ಗೆ ನನ್ನ ಸ್ನೇಹಿತರಿಗೆ ಹೇಳಿದೆ. ಬರಿ, ಆದರೆ ನೀನು vulnerableಅಲ್ಲವೆಂಬುದನ್ನ ಖಚಿತಪಡಿಸಿಕೊ, ನಿನ್ನ ಪೇಪರ್‌ಗಳು ಕ್ರಮವಾಗಿರಲಿ, ತೆರಿಗೆ ಕಟ್ಟಿರುವ ಬಗ್ಗೆ ಖಚಿತಪಡಿಸಿಕೊ ಎಂದು ಎಚ್ಚರಿಸಿದರು. ನನ್ನ ಪೇಪರ್‌ಗಳು ಕ್ರಮವಾಗಿದೆ. ತೆರಿಗೆ ಕಟ್ಟಿದ್ದೇನೆ, ಆದರೆ ವಾತಾವರಣ ಹೀಗಿರುವಾಗ ಯಾರು vulnerable ಆಗಿಲ್ಲದೆ ಇರಲು ಸಾಧ್ಯ? ಅಣುಬಾಂಬ್ ವಿರೋಧಿಸುವುದನ್ನು ದೇಶ

ವಿರೋಧಿ, ಹಿಂದು ವಿರೋಧಿ ಎಂದು ನನ್ನ ಮಿದುಳಿನಲ್ಲಿ ಅಚ್ಚೊತ್ತುವುದಾದರೆ, ತೊರೆದುಕೊಳ್ಳಲು ನಾನು ಸಿದ್ಧ. ನಾನೊಬ್ಬಳು ಸ್ವತಂತ್ರ, ಓಡಾಡುವ ಪ್ರಜಾಪ್ರಭುತ್ವವೆಂದು ಘೋಷಿಸಿಕೊಳ್ಳುತ್ತೇನೆ. ನಾನು ಈ ಭೂಮಿಯ ನಾಗರೀಕಳು, ನನಗೆ ಗಡಿಗಳಿಲ್ಲ, ಬಾವುಟವಿಲ್ಲ. ನಾನು ಹೆಣ್ಣು, ಆದರೆ ನಪುಂಸಕರ ವಿರುದ್ಧ ನನ್ನ ವಿರೋಧವೇನಿಲ್ಲ. ನನ್ನ ಯೋಜನೆಗಳು ಸರಳ. ನಾನು ಯಾವುದೇ ಅಣ್ವಸ್ತ್ರ ಉತ್ಪಾದನಾ ನಿಷೇಧ ಒಪ್ಪಂದಕ್ಕೆ ಅಥವಾ ಅಣ್ವಸ್ತ್ರ ಪರೀಕ್ಷೆ ನಿಷೇಧ ಒಪ್ಪಂದಕ್ಕೆ ಸಹಿ ಹಾಕಲು ಸಿದ್ಧ. ವಲಸೆಗಾರರಿಗೆ ಸ್ವಾಗತವಿದೆ. ನಮ್ಮ ಬಾವುಟ ರೂಪಿಸಲು ನೀವು ಸಹಾಯ ಮಾಡಬಹುದು.

ನನ್ನ ಜಗತ್ತು ಸತ್ತು ಹೋಗಿದೆ. ಅದರ ಅಳಿವಿಗೆ ಶೋಕ ವ್ಯಕ್ತಪಡಿಸಲು ಬರೆಯುತ್ತೇನೆ. ಅದೊಂದು ದೋಷಪೂರಿತ, ಬೆಳೆಯುವ ಸಾಧ್ಯತೆಯೇ ಇಲ್ಲದಾಗಿತ್ತು. ಹುಣ್ಣು ಕಲೆಗಳ ಜಗತ್ತು, ತುಂಬಾ ಪ್ರೀತಿಸುತ್ತಿದ್ದ ಕಾರಣ ನಾನೂ ತಾಳಿಕೊಳ್ಳಲಾರದೆ ಟೀಕಿಸುತ್ತಿದ್ದ ಜಗತ್ತು. ಸಾವಿಗೆ ನಾನು ಅರ್ಹಳಲ್ಲ, ಅದು ಸಹ ಅನಾಥವಾಗಲು ಅರ್ಹತೆ ಪಡೆದಿರಲಿಲ್ಲ. ಕ್ಷಮಿಸು ನನ್ನ. ಭಾವುಕತೆ ತಂಪಲ್ಲವೆಂಬ ಅರಿವಾಗಿದೆ ನನಗೆ. ಆದರೆ ನನ್ನೊಳಗಿನ ಶೂನ್ಯತೆಯೊಂದಿಗೆ ಏನು ಮಾಡಲಿ? ನಾನದನ್ನು ಪ್ರೀತಿಸಿದ್ದು, ಅದು ಮಾನವೀಯತೆಗೆ ಆಯ್ಕೆ ಸ್ವಾತಂತ್ರ್ಯ ನೀಡಿತ್ತು. ಅದಕ್ಕೆ ಬೇರೊಂದು ರೀತಿಯ ಬದುಕೂ ಇದೆ ಎಂಬುದನ್ನು ಒತ್ತಿ ಹೇಳುತ್ತಿದ್ದ ಹಠಮಾರಿ ಬೆಳಕಿಂಡಿ ಅದು. ಅದೊಂದು ಚಲನಶೀಲ ಸಾಧ್ಯತೆ. ಅವೆಲ್ಲವೂ ಈಗ ಹೊರಟುಹೋಗಿದೆ. ಭಾರತದ ಅಣ್ವಸ್ತ್ರ ಪರೀಕ್ಷೆಗಳು, ಅದನ್ನು ನಡೆಸಿದ ರೀತಿ, ಅದನ್ನು ನಾವೆಲ್ಲರೂ ಉನ್ಮಾದಗೊಂಡು ಸ್ವಾಗತಿಸಿದ್ದು ಎಲ್ಲವೂ ಅಸಮರ್ಥನೀಯ. ನನಗಿದು ಭಯಾನಕತೆಯನ್ನು ಸಂಕೇತಿಸುತ್ತದೆ. ಕಲ್ಪನೆ ಕೊನೆಯಾದಂತೆ, ಸ್ವಾತಂತ್ರ್ಯದ ಕೊನೆ.

ಕಳೆದ ಆಗಸ್ಟ್ 15ರಂದು ನಾವು ಸುವರ್ಣ ಸ್ವಾತಂತ್ರೋತ್ಸವ ಆಚರಿಸಿದ್ದೇವೆ. ಮುಂದಿನ ಮೇ ತಿಂಗಳನ್ನು ಅಣು ಸ್ಫೋಟದ ವಾರ್ಷಿಕೋತ್ಸವವನ್ನಾಗಿ ಆಚರಿಸಬಹುದು.

ಅವರೇಕೆ ಹೀಗೆ ಮಾಡಿದರು?

ರಾಜಕೀಯ ಮೈಲಿಗಲ್ಲು ಎಂಬುದು ಮಾಮೂಲಿ, ಸಿನಿಕ ಉತ್ತರ. ಅದು ರಾಜಕೀಯ ಮೈಲಿಗಲ್ಲೇಕಾಗಬೇಕಿತ್ತು ಎಂಬ ಮತ್ತೊಂದು ಮೂಲಭೂತ ಪ್ರಶ್ನೆ ಎತ್ತುತ್ತದೆ ಎಂಬುದನ್ನು ಬಿಟ್ಟರೆ ಅದರಲ್ಲೇನು ಹುರುಳಿಲ್ಲ.

ನೀಡಲಾಗಿರುವ ಮೂರು ಅಧಿಕೃತ ಕಾರಣಗಳೆಂದರೆ - ಚೈನಾ, ಪಾಕಿಸ್ತಾನ ಮತ್ತು ಪಶ್ಚಿಮದ ಕಪಟತೆಯನ್ನು ತೆರೆದಿಡುವುದು.

ಈ ಕಾರಣಗಳ ಮುಖ್ಯ ಮೌಲ್ಯವನ್ನೆ ತೆಗೆದುಕೊಂಡು ಪರೀಕ್ಷಿಸಿದಾಗ ಅವು ಒಂದು ರೀತಿ ಮರಳುಗೊಳಿಸುವಂತಹವು. ಅವು ಗಂಭೀರ ವಿಷಯವಲ್ಲವೆಂದು ನಾನು ಹೇಳುವುದಿಲ್ಲ. ಆದರೆ ಅವು ಹೊಸತೇನಲ್ಲ. ಹಳೇ ದಿಗಂತದಲ್ಲಿ ಹೊಸದೆಂದರೆ ಭಾರತ ಸರ್ಕಾರ. ನಮ್ಮ ಪ್ರಧಾನ ಮಂತ್ರಿಗಳು ಅಮೇರಿಕ ಅಧ್ಯಕ್ಷರಿಗೆ ಬರೆದ ಪತ್ರದಲ್ಲಿ "ಭದ್ರತೆ ಕುಸಿಯುತ್ತಿರುವುದ ರಿಂದಾಗಿ ಅಣ್ವಸ್ತ್ರ ಪರೀಕ್ಷೆಗಳು ಅನಿವಾರ್ಯ"ವೆಂದು ಬರೆದಿದ್ದಾರೆ. ಅಲ್ಲದೆ 1962ರಲ್ಲಿ ಚೈನಾದೊಂದಿಗಿನ ಯುದ್ಧ, ಕಳೆದ 50 ವರ್ಷಗಳಲ್ಲಿ ಪಾಕಿಸ್ತಾನದೊಂದಿಗೆ ಮೂರು ಭಾರಿ ನಡೆದ ಆಕ್ರಮಣಗಳು ಮತ್ತು ಕಳೆದ 10 ವರ್ಷಗಳಲ್ಲಿ ಜಮ್ಮು ಕಾಶ್ಮೀರದಲ್ಲಿ ಪಾಕಿಸ್ತಾನ ಪ್ರಾಯೋಜಿತ ಭಯೋತ್ಪಾದನೆಯನ್ನು ಉಲ್ಲೇಖಿಸಿದ್ದಾರೆ.

ಚೈನಾದೊಂದಿಗೆ ನಡೆದ ಯುದ್ಧ 35 ವರ್ಷ ಹಳೆಯದು. ಇನ್ನಾವುದೂ ಬಲವಾದ ರಹಸ್ಯ ಇಲ್ಲ ಎನ್ನುವುದಾದರೆ, ಚೀನಾ ಮತ್ತು ಭಾರತ ಸಂಬಂಧ ಕೊಂಚ ಮಟ್ಟಿಗೆ ಸುಧಾರಿಸಿದೆ. ಅಣ್ವಸ್ತ್ರ ಪರೀಕ್ಷೆಯ ಕೊಂಚ ದಿನಗಳ ಮೊದಲು ಚೈನಾದ ಚೈನೀಸ್ ಪೀಪಲ್ಸ್ ಲಿಬರೇಶನ್ ಆರ್ಮಿಯ ಮುಖ್ಯ ಜನರಲ್ ಫ್ಯೂಕ್ಯೂನಾಯು ಭಾರತದ ಸೇನಾ ಮುಖ್ಯ ಜನರಲ್ ಅವರ ಅತಿಥಿಯಾಗಿ ಬಂದಿದ್ದರು. ಯುದ್ಧದ ಯಾವ ಮಾತು ಆಗ ಕೇಳಿ ಬಂದಿರಲಿಲ್ಲ. ಪಾಕಿಸ್ತಾನದೊಂದಿಗೆ ಆದ ತೀರಾ ಇತ್ತೀಚಿನ ಯುದ್ಧವೆಂದರೆ 27 ವರ್ಷಗಳ ಹಿಂದೆ ನಡೆದದ್ದು. ಕಾಶ್ಮೀರ ಗಲಭೆ ಪೀಡಿತ ಪ್ರದೇಶವೆಂಬುದು ನಿಜ. ಪಾಕಿಸ್ತಾನ ಹಿಗ್ಗಿನಿಂದ ಉರಿಗೆ ಗಾಳಿ ಹಾಕುತ್ತಿರುವುದರ ಬಗ್ಗೆ ಅನುಮಾನವಿಲ್ಲ. ಆದರೆ ಉರಿ ಇದ್ದರೆ ತಾನೇ ಗಾಳಿ ಹಾಕುವುದು. ರವೆಯಷ್ಟಾದರೂ ಪ್ರಮಾಣಿಕತೆಯಿಂದ ಕಾಶ್ಮೀರವಲ್ಲದೆ, ಅಸ್ಸಾಂ, ತ್ರಿಪುರಾ, ನಾಗಾಲ್ಯಾಂಡ್, ಇಡೀ ನೈರುತ್ಯ ಭಾರತದಲ್ಲಿನ ಪರಿಸ್ಥಿತಿಗೆ ತನ್ನದೇನೂ ಕೈವಾಡವಿಲ್ಲವೆಂದು ಕರೆದುಕೊಳ್ಳಲು ಭಾರತ ಸರ್ಕಾರಕ್ಕೆ ಸಾಧ್ಯವಿದೆಯೆ? ತನ್ನದೇನೂ ತಪ್ಪಿಲ್ಲವೆಂದು ಮುಕ್ತವಾಗಲು ಸಾಧ್ಯವಿಲ್ಲ. ಪಾಕಿಸ್ತಾನದ ಮೇಲೆ ಅಣ್ವಸ್ತ್ರಗಳನ್ನು ಗುರಿ ಮಾಡಿದ ಮೇಲೆ ಅದು ಸಾಧ್ಯವಾಗುವುದೂ ಇಲ್ಲ. ನಂತರ ಪಾಕಿಸ್ತಾನವೂ ಮುಕ್ತವಾಗಲು ಸಾಧ್ಯವಿಲ್ಲ. ನಾವು ಬೇರೆಬೇರೆ ದೇಶಗಳಾದರೂ ಆಕಾಶ, ಗಾಳಿ, ನೀರನ್ನು ಹಂಚಿಕೊಳ್ಳುತ್ತಿದ್ದೇವೆ. ಅಣು ವಿಕಿರಣದ ಚೂರುಗಳು ನೆಲದ ಮೇಲೆ ಬೀಳುವುದು ಗಾಳಿ,

ಮಣ್ಣಿನ ದಿಶೆಯನ್ನು ಆಧರಿಸಿದೆ. ಲಾಹೋರ್ ಮತ್ತು ಅಮೃತಸರದ ನಡುವಿನ ದೂರ ಕೇವಲ ಮೂವತ್ತು ಮೈಲಿ. ನಾವು ಲಾಹೋರಿನ ಮೇಲೆ ಬಾಂಬ್ ಹಾಕಿದರೆ ಪಂಜಾಬ್ ಹೊತ್ತಿ ಉರಿಯುತ್ತದೆ. ಕರಾಚಿಯ ಮೇಲೆ ಬಾಂಬ್ ಹಾಕಿದರೆ ಗುಜರಾತ್, ರಾಜಾಸ್ಥಾನವಲ್ಲದೆ ಬಾಂಬೆಯೂ ಉರಿದು ಹೋಗಬಹುದು. ಪಾಕಿಸ್ತಾನದ ವಿರುದ್ಧ ನಡೆಸುವ ಅಣುಯುದ್ಧ ನಮ್ಮ ಮೇಲೆ ನಡೆಯುವ ಯುದ್ಧದಂತೆ.

ಮೂರನೆ ಕಾರಣ ಪಶ್ಚಿಮದ ಕಪಟತೆ-ಇನ್ನಷ್ಟು ಅವರ ಕಪಟತೆಯನ್ನು ಬಯಲಿಗೆಳೆಯಬೇಕು. ಭೂಮಿ ಮೇಲಿನ ಯಾವ ಸಭ್ಯ ಮನುಷ್ಯನಿಗೆ ಆ ಕುರಿತು ಭ್ರಮೆ ಇದೆ? ಆ ಜನರ ಇತಿಹಾಸವು ಸ್ಪಂಜಿನಂತೆ ಇತರರ ರಕ್ತವನ್ನು ಹೀರಿಕೊಂಡಿದೆ. ವಸಾಹತುಕರಣ, ವರ್ಣದ್ವೇಷ, ಗುಲಾಮಗಿರಿ, ಜೀವಾಣುಯುದ್ಧ, ರಸಾಯನಿಕ ಶಸ್ತ್ರಾಸ್ತ್ರಗಳು ಎಲ್ಲವನ್ನು ಕಂಡು ಹಿಡಿದವರು ಅವರು. ದೇಶಗಳನ್ನು ಕೊಳ್ಳೆ ಹೊಡೆದಿದ್ದಾರೆ. ನಾಗರಿಕತೆಗಳನ್ನು ಒರೆಸಿ ಹಾಕಿದ್ದಾರೆ, ಜನಾಂಗಗಳನ್ನೇ ನಾಶ ಮಾಡಿದ್ದಾರೆ. ಜಗತ್ತಿನ ರಂಗದ ಮೇಲೆ ಅವರು ಪೂರ್ತಿ ಬೆತ್ತಲಾಗಿ ನಿಂತಿದ್ದಾರೆ. ನಾಚಿಕೆಯಿಲ್ಲದೆ ಯಾಕೆಂದರೆ ಅವರಿಗೇ ಗೊತ್ತು, ಮಿಕ್ಕೆಲ್ಲರಿಗಿಂತ ಅವರ ಬಳಿ ಹೆಚ್ಚು ಹಣವಿದೆ, ಹೆಚ್ಚು ಆಹಾರ ಮತ್ತು ದೊಡ್ಡ ಬಾಂಬುಗಳಿವೆ ಎಂದು. ಒಂದು ಮಾಮೂಲಿ ದಿನ ನಮ್ಮೆಲ್ಲರನ್ನು ಒರೆಸಿ ಹಾಕಿಬಿಡಬಹುದೆಂದು ಅವರಿಗೆ ಗೊತ್ತು. ನಾನೆನ್ನುತ್ತೇನೆ ಅದು ಕಪಟತೆ ಅಲ್ಲ ದುರಹಂಕಾರವೆಂದು.

ನಮ್ಮ ಬಳಿ ಇರುವುದು ಕಡಿಮೆ ಹಣ, ಕಡಿಮೆ ಆಹಾರ ಮತ್ತು ಸಣ್ಣ ಬಾಂಬ್‌ಗಳು. ನಮ್ಮ ಬಳಿ ಉಳಿದ ಉಲ್ಲಾಸದ, ಅಳತೆ ಮಾಡದ ಸಂಪತ್ತು ಇದೆ ಅಥವಾ ಇತ್ತು. ನಾವೀಗ ಎಲ್ಲವನ್ನೂ ಪಣಕ್ಕಿಟ್ಟಿದ್ದೇವೆ.

ವ್ಯಾಪಾರ ಮಾಡಿದ್ದೇವೆ. ಯಾವುದಕ್ಕೆ? ನಾವು ಯಾರನ್ನು ನಿರ್ಲಕ್ಷಿಸಿದ್ದೆವೆಂದುಕೊಂಡಿದ್ದೇವೋ ಅವರೊಂದಿಗೆ ಕರಾರು ಮಾಡಿಕೊಳ್ಳಲು, ಅವರ ಆಟವನ್ನು ಅವರದೇ ರೀತಿಯಲ್ಲಿ ಆಡಲು ಒಪ್ಪಿದಂತೆ. ಅವರ ಶರತ್ತು, ನಿಬಂಧನೆಗಳನ್ನು ಪ್ರಶ್ನೆಯಿಲ್ಲದೆ ಒಪ್ಪಿಕೊಂಡಿದ್ದೇವೆ. ಇದರ ಮುಂದೆ CTBT ಏನೂ ಇಲ್ಲ. ಒಟ್ಟಾರೆ ನಮ್ಮನ್ನು ಕಪಟಿಗಳೆಂದುಕೊಳ್ಳುವುದು ಸೂಕ್ತ. ಯಾವುದನ್ನು ನೈತಿಕ ನಿಲುವೆನ್ನುತ್ತಾರೊ ಅದನ್ನೆ ನಿರ್ಲಕ್ಷಿಸಿದ್ದೇವೆ. ಉದಾಹರಣೆಗೆ : ನಮ್ಮ ಬಳಿ ತಂತ್ರಜ್ಞಾನ ಇದೆ, ಬೇಕೆಂದರೆ ನಾವೂ ಬಾಂಬ್ ಮಾಡಬಲ್ಲೆವು, ಆದರೆ ಮಾಡುವುದಿಲ್ಲ. ನಾವದನ್ನು ನಂಬುವುದಿಲ್ಲ, ಹೇಡಿಗಳಂತೆ ನಮ್ಮನ್ನು ಸೂಪರ್ ಪವರ್‌ಗಳ ಕ್ಲಬ್ಬಿಗೆ ಸೇರಿಸಿಕೊಳ್ಳಿರೆಂದು ಗದ್ದಲವೆಬ್ಬಿಸುತ್ತಿದ್ದೇವೆ. ಇದಂತು ಹಾಸ್ಯಾಸ್ಪದ. ನಮ್ಮ ಬಳಿ ಚೆಂಡು ಇದೆ ಎಂದು ವಿಶ್ವಕಪ್ ಫೈನಲ್ಸ್‌ಗೆ ಸೇರಿಸಿಕೊಳ್ಳಿ ಎಂದಂತೆ. ಅರ್ಹತೆ ಇದೆಯೋ ಇಲ್ಲವೋ ಅಥವಾ ನಾವು ಫುಟ್‌ಬಾಲ್ ಆಡುವುದಿಲ್ಲವಾದ್ದರಿಂದ ನಮ್ಮ ಬಳಿ ಟೀಮ್ ಇಲ್ಲವೇ ಎಂದರೂ ಪರವಾಗಿಲ್ಲ. ಮೈದಾನ ಪ್ರವೇಶಿಸಿರುವುದನ್ನು ಆರಿಸಿಕೊಂಡಿರುವುದರಿಂದ ಆಟದ ನಿಯಮಗಳನ್ನು ಕಲಿಯ ಬೇಕು. ಮೊದಲ ನಿಯಮ ಪರಿಣಿತರನ್ನು ಒಪ್ಪಿಕೊಳ್ಳಬೇಕು. ಯಾರು ಉತ್ತಮ ಆಟಗಾರರು? ಹೆಚ್ಚಿನ ಹಣ, ಆಹಾರ, ಬಾಂಬ್ ಹೊಂದಿದವರು. ಎರಡನೆ ನಿಯಮ : ಅವರಿಗೆ ಹೋಲಿಸಿದಾಗ ನಮ್ಮ ಸ್ಥಾನವೇನೆಂಬುದನ್ನು ಕಂಡು ಕೊಳ್ಳುವುದು, ಅಂದರೆ ನಮ್ಮ ಯೋಗ್ಯತೆ, ಸ್ಥಾನದ ಪ್ರಾಮಾಣಿಕ ಬೆಲೆ ಕಟ್ಟುವಿಕೆ. ಪ್ರಮಾಣದ ದೃಷ್ಟಿಯಿಂದ ಅದು ಹೀಗಿದೆ -

ಹೆಚ್ಚು ಕಡಿಮೆ ಶತಕೋಟಿ ಜನರಿರುವ ದೇಶ ನಮ್ಮದು. ಅಭಿವೃದ್ಧಿಯ ದೃಷ್ಟಿಯಿಂದ, ಸಂಯುಕ್ತ ಸಂಸ್ಥೆಯು ಪಟ್ಟಿ ಮಾಡಿರುವ 175 ದೇಶಗಳ ಪೈಕಿ ನಾವು 138 ಸ್ಥಾನದಲ್ಲಿದ್ದೇವೆ. 400 ದಶಲಕ್ಷ ಜನ ಅನಕ್ಷರಸ್ಥರೆಂದು, ಬಡತನದಲ್ಲಿ ಬದುಕುತ್ತಿದ್ದಾರೆ. ಸುಮಾರು 600 ದಶಲಕ್ಷ ಜನ ಮೂಲಭೂತ ನೈರ್ಮಲ್ಯದ ವ್ಯವಸ್ಥೆಯಿಲ್ಲದೆ ಬದುಕುತ್ತಿದ್ದಾರೆ. 200 ದಶಲಕ್ಷ ಜನರಿಗೆ ಸುರಕ್ಷಿತ ಕುಡಿಯುವ ನೀರೂ ಇಲ್ಲ. ಇದಕ್ಕೆ ಹೋಲಿಸಿದಾಗ ಮೇಲೆ ಹೇಳಿದ ಮೂರು ಅಧಿಕೃತ ಕಾರಣಗಳಿಗೆ ಹುರುಳಿಲ್ಲ. ಬಾಂಬಿನ ಹಾದಿ ಹಿಡಿದದ್ದಾದರೂ ಏಕೆ? ಕುಸಿದು ಬೀಳುವುದರಿಂದ ತಪ್ಪಿಸಿಕೊಳ್ಳಲು ರಾಷ್ಟ್ರೀಯ ಧ್ಯೇಯವೊಂದು ಬೇಕಿತ್ತು. ಚಲಾವಣೆಯಲ್ಲಿರುವಂತಹ ಬಡತನ, ಅನಕ್ಷರತೆ ಚುನಾವಣೆ ಬಿಟ್ಟರೆ ಮತ್ತೊಂದು ಧ್ಯೇಯವಿಲ್ಲವಲ್ಲ! ನಿಜಕ್ಕೂ ನಮಗೆ ಪರಿಹಾರ ಬೇಕಿದ್ದಲ್ಲಿ ಕೆಲವು ಅಹಿತ ಪ್ರಶ್ನೆಗಳಿಗೆ ಪ್ರಾಮಾಣಿಕ ಉತ್ತರಗಳು ಬೇಕು. ಈ ಪ್ರಶ್ನೆಗಳನ್ನು ಹಿಂದೆ ಕೇಳಿಲ್ಲವೆಂದಲ್ಲ. ಸುಮ್ಮನೆ ಹಾಗೇ ಯಾರಿಗೂ ಕೇಳಿಸದಂತೆ ಉತ್ತರ ಗೊಣಗಿಕೊಳ್ಳುವುದನ್ನೆ ನಾವು ಬಯಸುವುದು.

ಭಾರತೀಯ ಎಂಬ identity ನಿಜಕ್ಕೂ ಇದೆಯೆ?

ನಿಜವಾಗಲೂ ನಮಗದರ ಅವಶ್ಯಕತೆ ಇದೆಯೆ?

ಯಾರು ಅಧಿಕೃತ ಭಾರತೀಯರು? ಯಾರು ಅಲ್ಲ?

ಭಾರತ ಭಾರತೀಯರದ್ದೆ?

ಅದು ಪರಿಗಣಿಸುವಂತಹುದೆ?

ಆಧುನಿಕ ಭಾರತದ ಭೌಗೋಳಿಕ ಗಡಿಯನ್ನು ರಚಿಸಿದ್ದು 1899ರ ಬ್ರಿಟಿಷ್ ಪಾರ್ಲಿಮೆಂಟ್ ಕಾಯ್ದೆ ಅನುಸಾರವಾಗಿ. ಬ್ರಿಟಿಷರು ಭಾರತದಲ್ಲಿ ಸಾಮ್ರಾಜ್ಯ ಸ್ಥಾಪಿಸಿದ್ದು ವಾಣಿಜ್ಯ ಮತ್ತು ಆಡಳಿತದಂತಹ ಭಾವರಹಿತ ವಿಷಯಗಳಿಗಾಗಿ. ಹುಟ್ಟುತ್ತಲೆ ಅವಳು ತನ್ನ ಹುಟ್ಟಿನ ಕಾರಣಕರ್ತರ ವಿರುದ್ಧ ಹೋರಾಟ ಆರಂಭಿಸಿದಳು. ಹಾಗಾದರೆ ಭಾರತ ಭಾರತೀಯರದೆ? ಇದೊಂದು ಕಷ್ಟದ ಪ್ರಶ್ನೆ, ನಾವು ಪ್ರಾಚೀನ ಜನರು ಇತ್ತೀಚಿನ ದೇಶದಲ್ಲಿ ಬದುಕಲು ಕಲಿಯುತ್ತಿರುವವರು ಎಂದು ಹೇಳಬಹುದೇನೋ.

ಸತ್ಯವೇನೆಂದರೆ ಭಾರತ ಒಂದು ಅಸ್ವಾಭಾವಿಕ ರಾಜ್ಯ. ಜನರು ರಚಿಸಿದ, ಸರ್ಕಾರ ರಚಿಸಿದ ರಾಜ್ಯ. ಕೆಳಗಿನಿಂದ ಮೇಲಲ್ಲದೆ, ಮೇಲಿನಿಂದ ಕೆಳಕ್ಕೆ ನಿರ್ಮಾಣವಾದ ರಾಜ್ಯ. ಭಾರತದ ಬಹಳಷ್ಟು ಜನ ನಾಗರೀಕರೂ ಈಗಲೂ ಭೂಪಟದಲ್ಲಿ ಭಾರತದ ಗಡಿಗಳನ್ನು ಗುರುತಿಸಲಾರರು. ಎಲ್ಲಿ ಯಾವ ಭಾಷೆ ಮಾತನಾಡುತ್ತಾರೆ ಅಥವಾ ಯಾವ ಪ್ರದೇಶದಲ್ಲಿ ಯಾವ ದೇವರನ್ನು ಪೂಜಿಸುತ್ತಾರೆಂದು ಅನೇಕರಿಗೆ ತಿಳಿದಿರುವುದಿಲ್ಲ. ಬಹಳಷ್ಟು ಜನ ತಮ್ಮ ದೇಶದ ವಿಸ್ತಾರ ಮತ್ತು ಸಂಕೀರ್ಣತೆಯನ್ನು ಅರ್ಥಮಾಡಿಕೊಳ್ಳುವುದಾದರು ಏಕೆ ಬೇಕು? ಅಲ್ಲದೆ ರಾಜ್ಯ ಎಂಬುದರ ಬಗ್ಗೆ ಅರಿವು ಇಲ್ಲದೆ ಅರ್ಥಮಾಡಿಕೊಳ್ಳುವುದಾದರೂ ಹೇಗೆ? ಅವರಿಗೆ ಭಾರತ ಎಂಬುದು ಚುನಾವಣೆ ಸಮಯದಲ್ಲಿ ಕೇಳಿ ಬರುವ ಗದ್ದಲದ ಘೋಷಣೆ! ಅಥವಾ ಟಿ.ವಿ. ಕಾರ್ಯಕ್ರಮದಲ್ಲಿ ವಿವಿಧ ಪ್ರಾದೇಶಿಕ ಉಡುಪುಗಳನ್ನು ವೇಷ ಧರಿಸಿ 'ಮೇರಾ ಭಾರತ್ ಮಹಾನ್' ಎನ್ನುವ ಜನರ ಗುಂಪು.

ನಿಜವಾಗಲು ರಾಷ್ಟ್ರೀಯ ರಾಜಕೀಯ ಪಕ್ಷಗಳನ್ನು ರಚಿಸುವ ರಾಜಕಾರಣಿಗಳಿಗಷ್ಟೆ (ವ್ಯಾಪಾರ ಆಸಕ್ತಿ ಉಳ್ಳವರು ಎನ್ನುವುದು ಹೆಚ್ಚು ಪ್ರಸ್ತುತ) ಸ್ಪಷ್ಟವಾದ ಜಿಗುಟಾದ ರಾಷ್ಟ್ರೀಯ ಐಡೆಂಟಿಟಿ ಇರುವುದು. ಆ ಐಡೆಂಟಿಟಿಯನ್ನು ಪಡೆದು ಕೊಳ್ಳುವುದೇ ಗುರಿ. ಆ ಐಡೆಂಟಿಟಿಯೆನ್ನುವುದು ಇಲ್ಲದೆ ಹೋದರೆ ಅವರು ಅದನ್ನು ತಯಾರಿಸಬೇಕು. ಅದಕ್ಕೆ ಮತ ನೀಡಬೇಕೆಂದು ಜನರನ್ನು ಒಲಿಸಬೇಕು. ಅದು ಅವರ ತಪ್ಪಲ್ಲ, ಐಡೆಂಟಿಟಿಯು ಗಡಿಯೊಂದಿಗೆ ಬರುತ್ತದೆ. ಅದು ಕೇಂದ್ರೀಕೃತ ಸರ್ಕಾರದ ರಚನೆಯ ಸಹಜ ಅಂಶ. ನಮ್ಮಲ್ಲಿರುವ ಪ್ರಜಾಪ್ರಭುತ್ವದಲ್ಲಿ ಮೂಲಭೂತ ಊನಗಳಿವೆ. ದೇಶ ಹೆಚ್ಚು ಬಡವಾದಷ್ಟು, ಜನ ಹೆಚ್ಚು ಅನಕ್ಷರಸ್ಥರಾದಷ್ಟು ರಾಜಕಾರಣಿಗಳ ನೈತಿಕತೆ ಹೆಚ್ಚು.

ರಾಜಕೀಯ ಔಚಿತ್ಯವನ್ನು ಬಳಸಿಕೊಂಡು ಸತ್ತಿರುವ ಹೆಣವನ್ನು ಹೂಣದೆ ಅದರ ಪ್ರಯೋಜನ ಪಡೆದ ಕೀರ್ತಿ ಇಂದಿರಾಗಾಂಧಿಗೆ ಸಲ್ಲಬೇಕು. ಆಕೆ ಮತ್ತು ಆಕೆಯ ಮಗ ದೇಶ ಮೊಣಕಾಲೂರುವ ಸ್ಥಿತಿಗೆ ತಂದರೆ, ಈಗಿನ ಹೊಸ ಸರ್ಕಾರ ನಮ್ಮ ತಲೆಯನ್ನೇ ಅಲುಗಿಗೆ ಸಿಕ್ಕಿಸಿದೆ. ಒಂದರ್ಥದಲ್ಲಿ ಕಾಂಗ್ರೆಸ್ ಮತ್ತು ಇಂದಿರಾಗಾಂಧಿ ಸೃಷ್ಟಿಸಿದ ಭೂತವೇ ಬಿ.ಜೆ.ಪಿ. ಈ ಭೂತ ಕೋಮು ಅನುಮಾನ ಹಾಗೂ ರಾಜಕೀಯವೆಂಬ ಆಹಾರ ಬಳಸಿಕೊಂಡು ಬೆಳೆದಿರುವುದನ್ನು ಕಾಂಗ್ರೆಸ್ ಪೋಷಿಸಿ ಬೆಳೆಸಿದೆ, ಕಾಂಗ್ರೆಸ್ ಬೆಳೆಸಿ ಪೋಷಿಸಿದ್ದನ್ನ ಬಿ.ಜೆ.ಪಿ. ಮುಂದುವರೆಸಿದೆ ಅಷ್ಟೆ. ಇಂದಿರಾಗಾಂಧಿ ತೆರೆಮರೆಯಲ್ಲಿ ನಡೆಸಿದ ಆಟವನ್ನು ಬಿ.ಜೆ.ಪಿ. ನೇರವಾಗಿ ಬೀದಿಗಿಳಿದು ಪ್ರದರ್ಶಿಸಿದೆ. ಕಾಂಗ್ರೆಸ್ ರಾತ್ರಿಗಷ್ಟೆ ಸೀಮಿತ ಗೊಳಿಸಿದ್ದ ಆಟವನ್ನು BJP ಹಾಡು ಹಗಲೆ ಬೀದಿಗಳಲ್ಲಿ ಮನೆ-ಮನಗಳಲ್ಲಿ ನಡೆಸಿದೆ.

ಬಾಬ್ರಿ ಮಸೀದಿ ಪ್ರಕರಣದಲ್ಲಿ ಕಂಡ ಅವೇ ಮುಖಗಳೇ ತಾವೇನು ಮಾಡುತ್ತಿದ್ದೇವೆಂಬ ಕಲ್ಪನೆಯೇ ಇಲ್ಲದೆ ನ್ಯೂಕ್ಲಿಯರ್ ಬಾಂಬ್ ಸ್ಫೋಟಿಸಿದಾಗ ಪತ್ರಿಕೆಗಳಲ್ಲಿ ವಿಜೃಂಭಿಸಿದ್ದನ್ನು ಕಾಣಬಹುದು. ಕಾಂಗ್ರೆಸ್ ಬೀಜ ಬಿತ್ತಿ ಬೆಳೆದ ಬೆಳೆಯನ್ನು B.J.P. ಗೂಳಿಯಂತೆ ನುಗ್ಗಿ ತನ್ನದಾಗಿಸಿಕೊಂಡಿದೆ. ಒಬ್ಬರು ಮತ್ತೊಬ್ಬರ ಕೈನಲ್ಲಿ ಬೆಸೆದುಕೊಂಡಿದ್ದಾರೆ. ಅವರಿಬ್ಬರ ಮಧ್ಯೆ ನಮ್ಮನ್ನೆಲ್ಲಾ ಭಯಂಕರ ಜಾಗಕ್ಕೆ ತಂದು ನಿಲ್ಲಿಸಿದ್ದಾರೆ. ಭಾರತ ಬಾಂಬ್ ಸ್ಫೋಟಿಸಿದ್ದನ್ನು ಬೀದಿಗಿಳಿದು ವಿಕೃತವಾಗಿ ಆಚರಿಸಿದ ಇದೇ ಜನ ಪಾಶ್ಚಿಮಾತ್ಯ ಸಂಸ್ಕೃತಿಯ ಪ್ರತೀಕವೆಂದು ಕೋಕ್ ಹಾಗೂ ಪೆಪ್ಸಿಯನ್ನು ಮೋರಿಗೆ ಚೆಲ್ಲಿ ತಿರಸ್ಕರಿಸಿದ್ದಾರೆ. ಆದರೆ ನನಗೆ ಇವರ ಲಾಜಿಕ್ಕೇ ಗೊಂದಲವೆಬ್ಬಿಸಿದೆ. ಕೋಕ್ ಪಾಶ್ಚಾತ್ಯ ಸಂಸ್ಕೃತಿಯ ಪ್ರತೀಕವಾದರೆ, ನ್ಯೂಕ್ಲಿಯರ್ ಬಾಂಬ್ ಭಾರತೀಯ ಪರಂಪರೆಯ ಕೊಡುಗೆಯೇನು?

ನಾನು ಕೇಳಿದ್ದೇನೆ, ವೇದಗಳಲ್ಲಿ ಬಾಂಬಿನ ಬಗ್ಗೆ ಪ್ರಸ್ತಾಪವಿದೆ ಎಂದು, ಆದರೆ ವೇದದ ಒಳ ಹೊಕ್ಕಾಗ ಅಲ್ಲಿ ಕೋಕ್‌ನ ಬಗ್ಗೆಯೂ ಹೇಳಲಾಗಿದೆ. ಅದೇ ಧರ್ಮ ಗ್ರಂಥ ಗಳಲ್ಲಿರುವ ಅದ್ಭುತ ವಿಚಾರ ಅದು ಹುಡುಕುವವನನ್ನು ಅವಲಂಬಿಸಿರುತ್ತದೆ. ಹುಡುಕುವನು ತನಗೆ ಅನುಕೂಲವಾಗುವ ವಿಚಾರವಷ್ಟೆ ಹೆಕ್ಕಿಕೊಂಡಿರುತ್ತಾನೆಂಬುದು ಕಟುಸತ್ಯ.

ಇನ್ನೂ 1990ಕ್ಕೆ ಬಂದರೆ ಪಾಶ್ಚಿಮಾತ್ಯರ ವೈಜ್ಞಾನಿಕ ಆವಿಷ್ಕಾರಗಳನ್ನು ಅಪ್ಪಿಕೊಳ್ಳುವ ನಾವು ಅವರ ಸಂಸ್ಕೃತಿ, ಊಟ,

ಉಡುಗೆ, ಸಂಗೀತ, ಸಿನಿಮಾ, ಸಾಹಿತ್ಯ ಎಲ್ಲವನ್ನು ಧಿಕ್ಕರಿಸುತ್ತೇವೆ. ಇದು ಠಕ್ಕುತನವಲ್ಲ, ನಗೆಪಾಟಲು.

ಭಾರತೀಯತೆ ಬಗ್ಗೆ ಬಡಬಡಿಸುವ ಸರ್ಕಾರ ಸತ್ಯಾಸತ್ಯತೆ ಬಗ್ಗೆ ಸರಿಯಾಗಿ ಪರಿಷ್ಕರಣೆ ಮಾಡಲಿ. ಯಾಕೆಂದರೆ ಈ ದೇಶದ ಮೂಲನಿವಾಸಿಗಳು ಹಿಂದೂಗಳಾಗುವ ಮುನ್ನ ಮನುಷ್ಯರಾಗಿದ್ದಾರೆಂಬುದು ಇತಿಹಾಸ. ಬುಡಕಟ್ಟು ಜನಾಂಗ ಈ ಮಣ್ಣಿನ ಮೂಲ ನಿವಾಸಿಗಳು ಎಂಬ ವಿಚಾರದಲ್ಲಿ ಸತ್ಯಾಂಶವಿದೆ. ಆದರೆ ಅವರನ್ನು ರಾಜ್ಯ ಹಾಗೂ ಅದನ್ನಾಳುವ ಜನ ಕಾಣುವ ರೀತಿ ಬೇರೆಲ್ಲರಿಗಿಂತ ಹೇಗಿದೆ? ತುಳಿಯುವುದು, ಮೋಸಗೊಳಿಸುವುದು, ಅವರ ಜಾಗವನ್ನೇ ಲಪಟಾಯಿಸುವುದೇ ತಾನೆ? ಪುಣ್ಯ ಕೆಲಸ ಮಾಡುವ ಮನಸ್ಸಿದ್ದರೆ ಮೊದಲು ಅವರ ಜಾಗವನ್ನು ಗೌರವದಿಂದ, ಅವರಿಗೆ ಹಿಂದಿರುಗಿಸುವುದೇ ಆಗಿದೆ. ನರ್ಮದ, ಸರ್ದಾರ್, ಸರೋವರದಂತಹ ಸಾರ್ವಜನಿಕ ಅಣೆಕಟ್ಟುಗಳನ್ನು ನಿಲ್ಲಿಸಿ, ಹೆಚ್ಚು ಜನರನ್ನು ಒಕ್ಕಲೆಬ್ಬಿಸದಂತೆ ತಡೆಯುವುದೇ ಆಗಿದೆ. ಇದು ಊಹಿಸಲೂ ಅಸಾಧ್ಯ ತಾನೆ? ಯಾಕೆಂದರೆ ಬುಡಕಟ್ಟು ಜನ ಅವರಿಗೆ ಏನು ಅಲ್ಲವೇ ಅಲ್ಲ. ಅವರ ಇತಿಹಾಸ, ಆಚಾರ, ವಿಚಾರ, ದೇವತಾರಾಧನೆ ತೃಣೀಕರಿಸಿ ಬಿಡಬಹುದು. ಅವರು ದೇಶದ ಒಳಿತಿಗಾಗಿ ಇಷ್ಟನ್ನು ತ್ಯಾಗ ಮಾಡಲು ಕಲಿಯಬೇಕಾಗಿದೆ?!

ಭಾರತೀಯವಲ್ಲದ ಕೆಲವು ರೂಢಿ ಹಾಗೂ ಕಟ್ಟಡಗಳನ್ನು ಬಹಿಷ್ಕರಿಸುವುದಕ್ಕೆ ಸಂಶೋಧನೆಯ ಅಗತ್ಯವಿದ್ದರೂ ಸಹ ನಾಲಿಗೆಯ ತುದಿಯಲ್ಲೇ ಇರುವ ಕೆಲವನ್ನು ಪಟ್ಟಿ ಮಾಡಿದ್ದೇನೆ. ನಮ್ಮ ಅಡಿಗೆಯ ಮನೆಯಲ್ಲಿರುವ ಕೆಲವು ಸಾಂಬಾರ ಪದಾರ್ಥಗಳಲ್ಲಿ ಮೆಣಸಿನಕಾಯಿ (ಮೆಕ್ಸಿಕೋದು), ಟೊಮಟೋ (ಪೆರುದು) ಆಲೂಗಡ್ಡೆ (ಬೊಲಿವಿಯಾದು), ಕಾಫಿ (ಮೆಕ್ಸಿಕೋದು), ಟೀ, ಸಕ್ಕರೆ, ಚಕ್ಕೆ (ಚೀನಾದು)..... ಇವೆಲ್ಲವನ್ನು ನಮ್ಮ ಪಾಕದಿಂದ ವರ್ಜಿಸಬೇಕಾಗುತ್ತದೆ.

ಇನ್ನೂ ತಂಬಾಕು, ಕ್ರಿಕೆಟ್, ಇಂಗ್ಲೀಷ್, ಪ್ರಜಾಪ್ರಭುತ್ವ.... ಎಲ್ಲವೂ ವರ್ಜ್ಯ.

ಯಾವ ಯಾವ ಆಸ್ಪತ್ರೆಗಳಲ್ಲಿ ವೆಸ್ಟರ್ನ್ ಮೆಡಿಸಿನ್ ಕೊಡ್ತಾರೋ ಅಥವಾ ತೆಗೆದುಕೊಳ್ಳಲು ಸೂಚಿಸುತ್ತಾರೋ ಅವೆಲ್ಲಾ ಮುಚ್ಚಿಬಿಡಬೇಕು, ರೈಲ್ವೆ ಹಳಿ ಕಿತ್ತಬೇಕು, ವಿಮಾನಯಾನ ಬಂದಾಗಬೇಕು..... ಹೀಗೆ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಕೆಲವಕ್ಕೆ Essential ಎಂಬ ಹಣೆಪಟ್ಟಿ. ನಿಮ್ಮ ಮಕ್ಕಳನ್ನು ಅಮೇರಿಕಾಕ್ಕೆ ಓದಲು ಕಳಿಸುವುದೂ ಕೂಡ ಒಂದು ಅಪರಾಧ.

ಕಟ್ಟಡಗಳನ್ನೂ ನೆಲಸಮ ಮಾಡುವ ಕೆಲಸ ರಾಷ್ಟ್ರಪತಿ ಭವನದಿಂದ ಆರಂಭವಾಗಿ ಹಳ್ಳಿಗಳಲ್ಲಿ ಅಂತ್ಯವಾಗಬೇಕು. ಇವುಗಳಲ್ಲಿ ಸ್ಮಾರಕಗಳೂ ಸೇರಿವೆ. ಏಕೆಂದರೆ ಇವುಗಳಿರುವ ಜಾಗ ಹಿಂದೊಮ್ಮೆ ಬುಡಕಟ್ಟಿನವರದೋ ಅರಣ್ಯದೋ ಆಗಿತ್ತಲ್ಲ?

ಯಾವುದೇ ಒಂದೇ ಒಂದು ದೈವಾಂಶ ಸಂಭೂತ ಗುಂಪಿಗೆ ಅಧಿಕೃತವಾಗಿ ಇಂದು ಭಾರತ ಹೀಗಿದೆ, ಹೀಗಿರಬೇಕಾಗಿತ್ತು ಎಂದು ಹೇಳುವ ಅಧಿಕಾರವಿಲ್ಲ. ಯಾವ ಒಂದು ಧರ್ಮ/ಭಾಷೆ/ಜಾತಿ/ವಲಯ/ವ್ಯಕ್ತಿ/ಕಥೆ, ಪುಸ್ತಕ...... ನಾನೇ ಏಕೈಕ ಪ್ರತಿನಿಧಿ ಎಂದು ಹೇಳಲು ರೂಪಗೊಂಡಿಲ್ಲ. ಬದಲಾಗಿ ವಿವಿಧ ದೃಷ್ಟಿಕೋನದಿಂದ ಅದ ವಿಶ್ಲೇಷಣೆ ಮಾತ್ರ ಮಾಡಲು ಸಾಧ್ಯವಿದೆ ಅಷ್ಟೆ. ಅವರು ವಾದಿಸಬಹುದು, ಅಲ್ಲಗಳೆಯಬಹುದು, ಹೊಗಳಬಹುದು, ಆದರೆ ತಿರಸ್ಕರಿಸಲು, ನುಚ್ಚುನೂರು ಮಾಡಲು ಹಾಗೂ ಬೇಟೆಯಾಡಲು ಬರುವುದಿಲ್ಲ.

ಇತಿಹಾಸ ಮುಗಿದ ಅಧ್ಯಾಯ. ಅದನ್ನು ಪ್ರೀತಿಯಿಂದ ನಮಗೆ ಬೇಕಾದಂತೆ ಪರಿವರ್ತಿಸಿಕೊಳ್ಳಬಹುದೇ ವಿನಃ ನಮಗೆ ಬೇಡವಾದದನ್ನು ನಾಶಮಾಡುವುದಿಲ್ಲ. ಇಂತಹ ಕಲುಷಿತ ವಿಶ್ವದಲ್ಲೂ ಇನ್ನೂ ಸೌಂದರ್ಯವಿರುವುದು ನಮಗೆ ಹಿಂದಿನವರು ಬಿಟ್ಟು ಹೋದ ಬಳುವಳಿ. ಅದನ್ನು ನಮ್ಮದಾಗಿಸಿ ಕೊಂಡಿದ್ದೇವೆ ಅಷ್ಟೆ. ಇದರಿಂದ ನಾವು ಕಲಿಯುವುದಿದೆ. ಬಾಂಬ್ ತಯಾರಿಸುವುದರಿಂದ ಸರ್ವನಾಶವಾಗುತ್ತದೆ. ಅದು ಬಳಸುತ್ತೇವೋ, ಇಲ್ಲವೋ ಪ್ರಶ್ನೆ ಅದಲ್ಲ. ಹೇಗಿದ್ದರೂ ಅದು ನಮ್ಮನ್ನು ನಾಶಗೊಳಿಸುತ್ತದೆ.

ಬಾಂಬ್ ತಯಾರಿಸುವಷ್ಟು ಸುಲಭ 400 ಮಿಲಿಯ ಜನರಿಗೆ ಶಿಕ್ಷಣ ಕೊಡುವುದಲ್ಲವೆಂಬ ಸತ್ಯವೇ ನಮ್ಮ ವಿಜ್ಞಾನಿಗಳಿಗೆ ಹಾರ-ತುರಾಯಿಗಳಿಂದ ಸನ್ಮಾನಿಸುವುದು, ಬಿರುದು ಬಾವಲಿಗಳನ್ನು ಕೊಡುವುದರಲ್ಲಿ ಅಡಗಿದೆ.

ತನ್ನ ಹೆಸರನ್ನು ಸಹಿ ಮಾಡಲು ಬಾರದ ಸಾಮಾನ್ಯ ಪ್ರಜೆಗೆ ನ್ಯೂಕ್ಲಿಯರ್ ಬಾಂಬ್‌ನ ಬಗ್ಗೆ ಗೊತ್ತೇನು? ಯಾರಾದರೂ ಅವನಿಗೆ ನ್ಯೂಕ್ಲಿಯರ್ ಯುದ್ಧವೆಂದರೆ ಏನೆಂದು ಹೇಳಿದ್ದಾರೇನು? ಅದಕ್ಕಾಗಿ ಗರ್ವಿಸಬೇಕಾಗಿಲ್ಲವೆಂಬ ವಿಚಾರ ಅವನಿಗೆ ವಿವರಿಸಿದ್ದಾರೇನು? ಹೀಗೆಂದರೇನೆಂದು ಅವನಿಗೆ

ಅವನದೇ ಆದ ಭಾಷೆಯಲ್ಲಿ ವಿವರಣೆಗಳು ಸಿಗುವುದೇನು? ಉದಾ : ಯುರೇನಿಯಂ ಎನ್‌ರಿಚ್‌ಮೆಂಟ್ ಇತ್ಯಾದಿ.

ಅವನ ಭಾಷೆಯ ಲೆಕ್ಕ ಯಾರಿಗಿದೆ? ಅವನು ಎಂದೂ ಪ್ರಶ್ನೆಯಾಗಿಯೇ ಇಲ್ಲ. ಅವನೊಂದು ಪೊರೆಯ ಚೀಲವಿದ್ದಂತೆ ಅವನದೇ ಆದ ಕೃಷ್ಣ, ಹನುಮಂತರ ಕಥೆಗಳನ್ನು ಅವನ ವಿರುದ್ಧವೇ ಅಸ್ತ್ರವಾಗಿ ಬಳಸುತ್ತಿದ್ದೇವೆ. ಚುನಾವಣೆ ಸಮಯದಲ್ಲಿ ಕೋಶದಿಂದ ಹೊರ ಬಿಟ್ಟು ಓಟು ಪಡೆದ ಮೇಲೆ ಅವನ ಬುದ್ಧಿ ಮತ್ತೆಗೆ ಗೋಲಿ ಹೊಡೆದು ಅವನನ್ನು ಅಲ್ಲೇ ಕಳಿಹಿಸುವುದಿಲ್ಲವೇ? ನಾನು ಯಾವುದೇ ಒಬ್ಬ ವ್ಯಕ್ತಿಯ ಬಗ್ಗೆ ಹೇಳಹೊರಟಿಲ್ಲ, ಮಿಲಿಯಗಟ್ಟಲೆ ಇರುವ ಜನಸಾಮಾನ್ಯರ ಬಗ್ಗೆ ಹೇಳುತ್ತಿದ್ದೇನೆ. ಇದು ಅವರ ಭೂಮಿ ಎಂದು ನಿಮಗೆ ಗೊತ್ತೇ? ಅವರಿಗೆ ಕೂಡ ಅವರ ಹಣೆಬರಹದ ಬಗ್ಗೆ ತಿಳಿದುಕೊಳ್ಳುವ ಹಕ್ಕಿದೆ. ಅವರಿಗೆ ಯಾರೂ ಏನನ್ನೂ ಹೇಳಿಲ್ಲ, ಅವರು ಬಯಸಿದರೂ ಅವರಿಗೆ ಹೇಳುವರ್‍ಯಾರೂ ಇಲ್ಲ. ಸತ್ಯವಾಗಿ ಅವರಿಗೆ ತಿಳಿಯುವ/ತಿಳಿಸುವ ಭಾಷೆಯೇ ಇಲ್ಲ. ಇದು ನಿಜವಾದ ಭಾರತದ ಭೀತಿ. ಶಕ್ತರು ಮತ್ತು ಅಶಕ್ತರ ನಡುವಿನ ಎಳೆಗಳು ಹಿಗ್ಗುತ್ತಲೇ ಇವೆ, ಎಂದೂ ಒಂದೆಡೆ ಸೇರುವುದಿಲ್ಲ, ಏನನ್ನೂ ಹಂಚಿಕೊಳ್ಳುವುದಿಲ್ಲ ಕೂಡ. ಕಡೆಗೆ ಭಾಷೆಯನ್ನು, ದೇಶವನ್ನೂ ಸಹ.

ಅವರಿಗ್ಯಾರು ಕೊಟ್ಟರು ಅನುಮತಿ, ಜನಾಭಿಪ್ರಾಯ ಪಡೆಯನು? ಪ್ರಧಾನಿಗೆ ನಾವು ಪ್ರೀತಿಸುವ ಭೂಮಿ, ಆಕಾಶ, ಪರ್ವತ, ನದಿ, ಹಳ್ಳಿ.... ಎಲ್ಲವನ್ನೂ ಬೂದಿಯಾಗಿಸುವ ಗುಂಡಿಯ ಮೇಲೆ ಬೆರಳಿಟ್ಟು ನಿಲ್ಲಲು ಅನುಮತಿ ಕೊಟ್ಟವರ್‍ಯಾರು? ನಮಗೇನೂ ಅನಾಹುತವಾಗುವುದಿಲ್ಲವೆಂಬ ಭರವಸೆ ಕೊಡಲು ಅವರ್‍ಯಾರು? ನಾವೇಕೆ ಅವರನ್ನು ನಂಬಬೇಕು? ನಂಬುವಂತಹ ಕೆಲಸವೇನನ್ನು ಅವರು ಮಾಡಿದ್ದಾರೆ?

ನ್ಯೂಕ್ಲಿಯರ್ ಬಾಂಬ್ ಪ್ರಜಾಪ್ರಭುತ್ವ ವಿರೋಧಿ, ದೇಶವಿರೋಧಿ, ಮಾನವ ವಿರೋಧಿ ಒಂದೇ ಪದದಲ್ಲಿ ಹೇಳುವುದಾದರೆ ಮಾನವ ಅನಿಷ್ಟ. ನಾವೇನಾದರೂ ನಿರ್ಮಿತ ಆಸ್ತಿಕನಾದರೆ ನೆನಪಿನಲ್ಲಿರಲಿ. ದೇವರಿಗೆ ಮನುಷ್ಯನ ಸವಾಲಿದು ಎಂದು ಸರಳವಾಗಿ ಹೇಳುವುದಾದರೆ ನಮ್ಮ ಹತ್ತಿರ ದೇವರು ಸೃಷ್ಟಿಸಿದ ಎಲ್ಲವನ್ನೂ ಸರ್ವನಾಶಗೊಳಿಸುವ ಶಕ್ತಿ ಇದೆ.

ನೀವು ನಾಸ್ತಿಕರಾದರೆ ಹೀಗೆ ಭಾವಿಸಿ 4,600 ಮಿಲಿಯನ್ ವರ್ಷ ಹಳೆಯದಾದ ನಮ್ಮ ಈ ವಿಶ್ವ ಒಂದು ಮಧ್ಯಾಹ್ನ ಒಳಗೆ ಕೊನೆಗೊಳ್ಳುತ್ತದೆ.

●

ವಿಶ್ವ ಸಂಪನ್ಮೂಲದ ಬಗ್ಗೆ ಹೊರತರಲಾಗಿರುವ ವರದಿಯ ಪ್ರಕಾರ, ಪ್ರತಿ ವರ್ಷ ನಲವತ್ತು ಲಕ್ಷ ಮಕ್ಕಳು ವಿಶ್ವದಲ್ಲಿ ಅಕ್ಯೂಟ್ ರೆಸ್ಪಿರೇಟರಿ ಇನ್‌ಫೆಕ್ಷನ್ಸ್‌ನಿಂದಾಗಿ ಸಾವನ್ನಪ್ಪುತ್ತಿದ್ದಾರೆ; ಪರಿಸರ ನಾಶದಿಂದಾಗಿ ಕಾಣಿಸಿಕೊಳ್ಳುತ್ತಿರುವ ಕಾಯಿಲೆಗಳಿಗೆ ವಿಶ್ವದ ಪ್ರತಿ ಐದು ಮಕ್ಕಳಲ್ಲಿ ಒಬ್ಬರು ಪ್ರತಿ ವರ್ಷ ಸಾವನ್ನಪ್ಪುತ್ತಿದ್ದಾರೆ.

* * *

ಭ್ರೂಣದ ಲಿಂಗ ಪರೀಕ್ಷೆ ಮತ್ತು ಹೆಣ್ಣು ಭ್ರೂಣದ ಹತ್ಯೆ ವಿರುದ್ಧ ಕಾಯ್ದೆ ಆಗಿದ್ದರೂ, ದೇಶಾದ್ಯಂತ ಪ್ರತಿ ವರ್ಷ ಸುಮಾರು 4,00,000 ಹೆಣ್ಣು ಭ್ರೂಣಗಳು ಹತ್ಯೆಯಾಗುತ್ತಿರುವುದಾಗಿ ಪಂಜಾಬ್‌ನಲ್ಲಿ ನಡೆಸಲಾದ ಸಂಶೋಧನೆಯೊಂದು ಬಯಲುಗೊಳಿಸಿದೆ.

* * *

ಸಂವಿಧಾನಕ್ಕೆ ತರಲಾದ 73ನೇ ತಿದ್ದುಪಡಿಯ ಪರಿಣಾಮವಾಗಿ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಜಾರಿಗೆ ಬಂದ ಶೇಕಡಾ 33ರಷ್ಟು ಮಹಿಳಾ ಮೀಸಲಾತಿಯಿಂದಾಗಿ ಮಹಿಳೆಯರಲ್ಲಿ ಮೂಡಿರುವ ಸಶಕ್ತತೆಯನ್ನು ಸಮರ್ಥವಾಗಿ ಚಿತ್ರೀಕರಿಸುವ ಚಲನಚಿತ್ರ "ಸಂಶೋಧನ್". ಮಾನವ ಮೌಲ್ಯಗಳ ಭಗ್ಗೆ ತೀವ್ರ ತುಡಿತ ಹೊಂದಿರುವ ಖ್ಯಾತ ಚಲನಚಿತ್ರ ನಿರ್ದೇಶಕ ಗೋವಿಂದ ನಿಹಲಾನಿ ಇದರ ಕರ್ತೃ.

*ಸಂಗ್ರಹ : ಶಾರದ*

# ಸ್ಥಳಾಂತರದ ನೋವು, ದುಮ್ಮಾನಗಳು

*ಬೀನಾ ಶ್ರೀನಿವಾಸನ್ ಅವರ "ರೆಸ್ಟ್‌ಲೆಸ್ ಬೌಂಡರೀಸ್" ಎ ಸ್ಟಡಿ ಆನ್ ದಿ ಇಂಪ್ಯಾಕ್ಟ್ ಆಫ್ ಅರ್ಬನ್ ಡಿಸ್‌ಪ್ಲೇಸ್‌ಮೆಂಟ್ ಆನ್ ವಿಮೆನ್ ಇನ್ ಬರೋಡಾ" ಎಂಬ 58 ಪುಟಗಳ ಕೃತಿಯನ್ನು ಮುಂಬೈನ ವಿರರಾಸ್ ಅಧ್ಯಯನ್ ಕೇಂದ್ರ ಪ್ರಕಟಿಸಿದೆ.*

*ಈ ಕೃತಿಯ ಒಳಪುಟಗಳಲ್ಲಿನ ವಿವರಗಳಿಗೆ ಅರ್ಥಪೂರ್ಣವಾದ ಚಿತ್ರಗಳನ್ನು ಕೆ.ಪಿ. ಶಶಿ ಬಿಡಿಸಿದ್ದಾರೆ. ಈ ಕೃತಿಗೆ ಸಂಶೋಧನಾ ಸಹಾಯಕರಾಗಿ ಧನ್‌ಗೌರಿ ವಘೇಲಾ ಹಾಗೂ ನೀಲಾ ದವೆ ಕೆಲಸ ಮಾಡಿದ್ದಾರೆ. 'ಸ್ಥಳಾಂತರ'ದ ಬಗ್ಗೆ ಈ ಕೃತಿಯಲ್ಲಿ ನಿರೂಪಿತವಾಗಿರುವ ಅಂಶಗಳನ್ನು ಈ ಲೇಖನದಲ್ಲಿ ಸಂಕ್ಷಿಪ್ತವಾಗಿ ವಿವರಿಸಲಾಗಿದೆ.*

ಅಭಿವೃದ್ಧಿಯ ಹೆಮ್ಮೆಯ ಪ್ರತೀಕಗಳಾಗಿ, ಆಧುನಿಕತೆಯ ಸಂಕೇತಗಳಾದ ಅನೇಕ ನಗರ ಕೇಂದ್ರಗಳು ಭಾರತದಲ್ಲಿವೆ. ವಸಾಹತುಶಾಹಿ ಆಡಳಿತ ರಾಷ್ಟ್ರದ ನಗರೀಕರಣದ ತರ್ಕ ಹಾಗೂ ನೆಲೆಯನ್ನು ಸೃಷ್ಟಿಸಿತ್ತು. ನಗರೀಕರಣ ಎನ್ನುವುದು ಆಧುನೀಕತೆ, ಕೈಗಾರಿಕೀರಣ ಹಾಗೂ ಅಭಿವೃದ್ಧಿಯ ಮೌಲ್ಯಗಳಿಗೆ ಪ್ರತೀಕ. ಈಗ ಸ್ವಾತಂತ್ರ್ಯ ಬಂದ 50 ವರ್ಷಗಳ ನಂತರ ನಗರೀಕರಣದ ದುಷ್ಪರಿಣಾಮಗಳು, ಅಸಮಾನ ಬೆಳವಣಿಗೆಗಳು ಸ್ಪಷ್ಟವಾಗಿ ಗೋಚರವಾಗುತ್ತಿವೆ.

'ಸ್ಥಳಾಂತರ'- ಅಭಿವೃದ್ಧಿಯ ಮತ್ತೊಂದು ಮುಖ. ಇದು ಹಲವು ಜನರಿಗೆ ವಾಸ್ತವ ಸತ್ಯವಾಗಿದ್ದು, ದಾರಿದ್ರ್ಯಕ್ಕೆ ದೂಡಿದೆ. ಹಲವು ಪೀಳಿಗೆಗಳು ವಾಸಿಸುತ್ತಿದ್ದ ನೆಲೆಯ ನಷ್ಟವಲ್ಲದೆ ನೈಸರ್ಗಿಕ ಸಂಪನ್ಮೂಲಗಳ ಸುಲಿಗೆಯೂ ಅಭಿವೃದ್ಧಿಯ ಹೆಸರಲ್ಲಿ ನಡೆದಿದೆ. ಈ ಬಗೆಯ ಹಲವು ಬಗೆಯ ವಿನಾಶಗಳಿಗೆ ತುತ್ತಾಗಿರುವವರು ಆದಿವಾಸಿಗಳು; ಅವರ ಭೂ, ಜಲ, ಅರಣ್ಯದ ಹಕ್ಕುಗಳ ಉಲ್ಲಂಘನೆಯಾಗಿದೆ.

ಸ್ಥಳಾಂತರವೆನ್ನುವುದು ಆರ್ಥಿಕ, ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಮಟ್ಟಗಳಲ್ಲಿ ಸಮುದಾಯಗಳನ್ನು ಬರಡಾಗಿಸುತ್ತದೆ. ಇದು ಸಮುದಾಯ ಬೆಂಬಲ ಸ್ವರೂಪವನ್ನು ಛಿದ್ರಗೊಳಿಸುತ್ತದೆ; ಕ್ರಮೇಣ ಸಮುದಾಯದ ಬದುಕಲ್ಲಿ ಶೂನ್ಯವನ್ನು ಸೃಷ್ಟಿಸುತ್ತದೆ. ಒಮ್ಮೆ ಸ್ಥಳಾಂತರಗೊಂಡಲ್ಲಿ ಅದು ಅಲ್ಲಿಗೇ ನಿಲ್ಲುವುದಿಲ್ಲ; ನಗರದ ಕೊಳೆಗೇರಿಗಳಲ್ಲಿ ಇದು ಅಂತ್ಯ ಕಾಣುತ್ತದೆ.

ಹಲವು ಯೋಜನೆಗಳಿಗಾಗಿ ಗ್ರಾಮೀಣ ಪ್ರದೇಶದಿಂದ ನಗರ ಪ್ರದೇಶಗಳಿಗೆ ಆಗುವ ಸ್ಥಳಾಂತರ ಗೋಚರವಾಗುವ ಮಟ್ಟದಲ್ಲಿ ನಡೆಯುತ್ತದೆ. ಆದರೆ ಪರಿಸರ ಹಾಗೂ ಅದನ್ನು ಅವಲಂಬಿಸಿದ ಜನರು ಕ್ರಮೇಣ ನಾಶವಾಗುವುದು ಅಗೋಚರ ವಾಗಿರುತ್ತದೆ. ನಗರ ನೆಲೆಯಲ್ಲಿನ ಸತತ ಸ್ಥಳಾಂತರಗಳನ್ನೂ ಸ್ಪಷ್ಟ ಕಾರಣಗಳಿಲ್ಲದೆಯೂ ನಡೆಸಲು ಅವಕಾಶವಿದೆ. ಈ ಹಿನ್ನೆಲೆಯಲ್ಲಿ ವಿವಿಧ ಹೈಕೋರ್ಟ್ ಹಾಗೂ ಸುಪ್ರೀಂ ಕೋರ್ಟ್‌ಗಳಲ್ಲಿ ಕೊಳೆಗೇರಿ ವಾಸಿಗಳನ್ನು ಸ್ಥಳಾಂತರಿಸುವ ಮೊದಲು ನೋಟಿಸ್‌ಗಳನ್ನು ನೀಡಬೇಕೆಂದು ಕಾನೂನು ಕ್ರಮಗಳನ್ನು ಕೈಗೊಳ್ಳಲಾಗಿದೆ.

ಗುಜರಾತ್ ಭಾರತದ ಪ್ರಮುಖ ಕೈಗಾರಿಕಾ ರಾಜ್ಯಗಳಲ್ಲಿ ಒಂದಾಗಿದೆ. ಅಹ್ಮದಾಬಾದ್ ನಂದೇಸಂ, ಬರೋಡಾ, ಸೂರತ್, ಅಂಕ್ಲೇಶ್ವರ್, ಭರೂಚ್ ಹಾಗೂ ವಾಪಿ - ಕೈಗಾರಿಕಾ ಕೇಂದ್ರಿತ ವಲಯಗಳಾಗಿದ್ದು 'ಚಿನ್ನದ ವಲಯ'ವೆಂದು ಕರೆಯಲಾಗುತ್ತದೆ. ಬರೋಡಾ ದೊಡ್ಡ ಕೈಗಾರಿಕಾ ನಗರವಾಗಿದ್ದು 1986ರ ಜನಸಂಖ್ಯಾಗಣತಿ ಪ್ರಕಾರ 12 ಲಕ್ಷ ಜನಸಂಖ್ಯೆ ಹೊಂದಿದೆ. ಹಿಂದಿನ ಬರೋಡಾ ರಾಜ್ಯ ಗಾಯಕ್‌ವಾಡ್‌ರ ಅರಸೊತ್ತಿಗೆಗೆ ಒಳಪಟ್ಟಿತ್ತು. ಮಹಾರಾಜಾ ಸಯಾಜಿರಾವ್ ಗಾಯಕ್‌ವಾಡ್ ಆಳ್ವಿಕೆಯಲ್ಲಿ ಬರೋಡಾ ಸಾಂಸ್ಕೃತಿಕ ಕೇಂದ್ರವಾಗಿ ಬೆಳೆಯಿತು. ಲಲಿತಕಲೆಗಳು ಹಾಗೂ ಪ್ರದರ್ಶಕ ಕಲೆಗಳಿಗೆ ಅವರು ಪ್ರೋತ್ಸಾಹ ನೀಡಿದರು. ಅವರು ದೂರದೃಷ್ಟಿಯುಳ್ಳ ಆಡಳಿತಗಾರರಾಗಿದ್ದರು. ಮಹಿಳೆಯರಿಗೆ ಆಸ್ತಿಯಲ್ಲಿ ಸಮಾನ ಹಕ್ಕು ನೀಡಿದ ಕಾನೂನನ್ನು ಜಾರಿಗೊಳಿಸಿದ ಮೊದಲ ರಾಜ್ಯ ಬರೋಡ. ಇದು ರಾಷ್ಟ್ರಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರ ಬದಲಾಯಿತು.

ಬರೋಡಾದಲ್ಲಿ 255ಕ್ಕೂ ಹೆಚ್ಚು ಬಸ್ತಿ (ಕೊಳೆಗೇರಿಗಳು) ಗಳು ಇದೆ. ಈ ಬಸ್ತಿಗಳಲ್ಲಿ ಇರುವವರು ಗುಜರಾತ್‌ನ ಬೇರೆ ನಗರಗಳು ಅಥವಾ ಇತರ ರಾಜ್ಯಗಳಿಂದ ವಲಸೆ ಬಂದವರು.

'ಸ್ವಾಶ್ರಯ' ಎನ್ನುವ ಸಂಸ್ಥೆ 'ಬಸ್ತಿ' ಮಹಿಳೆಯರ ಜೊತೆ ಕಳೆದ 10 ವರ್ಷಗಳಿಂದ ಕಾರ್ಯ ನಿರ್ವಹಿಸುತ್ತಿದೆ. ಲೇಖಕಿ ಬೀನಾ ಶ್ರೀನಿವಾಸನ್ ಅದರೂ ಈ ತರಡದ ಜೊತೆ ಕಾರ್ಯ ನಿರ್ವಹಿಸುತ್ತಿರುವವರು. ನಗರದಲ್ಲಿನ ಸ್ಥಳಾಂತರ, ಮಹಿಳೆಯರ ಮೇಲೆ ಯಾವ ರೀತಿಯ ಪರಿಣಾಮ ಬೀರುತ್ತದೆ ಎಂದು ಈ

ಕೃತಿಯಲ್ಲಿ ವಿಶ್ಲೇಷಿಸಲು ಯತ್ನಿಸಿರುವುದಾಗಿ ಅವರು ಹೇಳಿಕೊಂಡಿದ್ದಾರೆ. ಈ ಅಧ್ಯಯನಕ್ಕಾಗಿ 5 ಬಸ್ತಿಗಳಲ್ಲಿನ 156 ಮಹಿಳೆಯರನ್ನು ಸಂದರ್ಶಿಸಲಾಗಿದೆ. ಈ ಬಸ್ತಿಗಳು ಬರೋಡಾದ ವಿವಿಧೆಡೆ ಪರಸ್ಪರ ಅತಿ ದೂರದಲ್ಲಿವೆ.

ಒಂದು ಜಾಗದಿಂದ ಮತ್ತೊಂದು ಜಾಗಕ್ಕೆ ಸ್ಥಳಾಂತರಗೊಳ್ಳಲು ಮುಖ್ಯ ಕಾರಣ ಆರ್ಥಿಕ ಅನಿಶ್ಚಯತೆ ಹಾಗೂ ಭೂರಾಹಿತ್ಯತೆ.

ಬರೋಡಾದ ಜಿಐಡಿಸಿ ಅಂಬಾಜಿನಗರ ಕೊಳೆಗೇರಿಯಲ್ಲಿರುವ ಕುಸುಮಳ ಪ್ರಕಾರ, ಆಕೆಯ ತಂದೆ ಮಹಾರಾಷ್ಟ್ರದ ಹಳ್ಳಿಯೊಂದರಲ್ಲಿ ಕೃಷಿಕಾರ್ಮಿಕ, ಹಳ್ಳಿಯಲ್ಲಿ ಪ್ರತಿದಿನ ಕೆಲಸ ಸಿಗುತ್ತಿರಲಿಲ್ಲ. ಹೀಗಾಗಿ ಬರೋಡಾದಲ್ಲಿ ಕೆಲವು ನೆಂಟರೂ ಇದ್ದದ್ದರಿಂದ ಬರೋಡಾಗೆ ಬಂದರು. ಇಲ್ಲಿ ತಂದೆಗೆ, ತಾಯಿಗೆ ಸಿಗುತ್ತಿದ್ದ ಕೂಲಿಯಿಂದ ಎರಡು ಹೊತ್ತಿನ ಊಟ ಸಿಗುವಂತಾಯಿತು. ಹತ್ತು ವರ್ಷಗಳ ನಂತರ ಕುಸುಮಳ ವಿವಾಹವೂ ನಡೆಯಿತು. ಕೂಸು ಹುಟ್ಟಿದ ನಂತರ ಆಕೆಯ ತಂದೆ ತೀರಿಕೊಂಡರು. ಈಗ ಬದುಕು ಸಾಗಿಸಲು ಚಿಂದಿ ಆಯುವ ಕೆಲಸ ಮಾಡುತ್ತಿದ್ದಾಳೆ.

ದೇವಿಯ ತಂದೆಯೂ ಕೃಷಿ ಕಾರ್ಮಿಕನಾಗಿದ್ದ. ಆತನಿಗೆ ಎರಡು ಎಕರೆ ಜಮೀನು ಇತ್ತು. ದೇವಿಗೆ ಜಮೀನಿನ ಎಲ್ಲ ಕೆಲಸವೂ ಗೊತ್ತು. ಇಬ್ಬರು ಅಕ್ಕ ತಂಗಿಯರು, ನಾಲ್ವರು ಸೋದರರ ಕುಟುಂಬದವರು. ಮಕ್ಕಳು ಚಿಕ್ಕವರಿದ್ದಾಗಲೇ ತಂದೆ ತೀರಿಕೊಂಡಿದ್ದರಿಂದ ಜೀವನ ಸಾಗಿಸಲು ಕಷ್ಟ ಪಡಬೇಕಾಯಿತು. ಹತ್ತು ವರ್ಷಕ್ಕೇ ದೇವಿಗೆ ವಿವಾಹವಾಯಿತು. ಆತನೂ ಕೃಷಿ ಕಾರ್ಮಿಕ. ಆತ ಬೇರೊಂದು ಹುಡುಗಿಯ ಪ್ರೀತಿಗೆ ಸಿಲುಕಿ ದೇವಿಯನ್ನು ಹೊಡೆಯಲಾರಂಭಿಸಿದ. ನೆಂಟರ ನೆರವಿನಿಂದ ವಿಚ್ಛೇದನ ತೆಗೆದುಕೊಂಡ ದೇವಿ 4 ವರ್ಷಗಳ ನಂತರ ಮರು ವಿವಾಹವಾದಳು. ಆದರೆ ಮಗಳು ಸರಳಾಗೆ 3 ವರ್ಷವಾಗಿದ್ದಾಗ ಟಿಬಿಯಿಂದ ಪತಿ ತೀರಿಕೊಂಡ, ದೇವಿ ಜಮೀನಿನಲ್ಲಿ ಕೆಲಸ ಮಾಡಿ 2 ಎತ್ತು, 1 ಎತ್ತಿನ ಗಾಡಿ, 10 ಮೇಕೆಗಳನ್ನು ಖರೀದಿಸಿದ್ದಳು. ಆದರೆ ಪತಿಯ ಚಿಕಿತ್ಸೆಗಾಗಿ ಎಲ್ಲವನ್ನೂ ಮಾರಿಕೊಳ್ಳಬೇಕಾಯಿತು. ಪತಿಯ ಮರಣದ ನಂತರ ಮಕ್ಕಳು ಸರಳಾ ಹಾಗೂ ಬಾಯಾ ಜೊತೆ ಬರೋಡಾಗೆ ಸೋದರಿಯ ಮನೆಗೆ ಬಂದು ಇಡೀ ವರ್ಷ ನೆಲೆಸಿ ಚಿಂದಿ ಆಯುವ ಕೆಲಸ ಕಲಿತುಕೊಂಡಳು. ನಂತರ ಕಷ್ಟಪಟ್ಟು ದುಡಿದು ಜಿಐಡಿಸಿಯಲ್ಲೇ ಝೋಪಡಾ ಕಟ್ಟಿಕೊಂಡಿದ್ದಾಳೆ. ಮಗಳನ್ನು ನಗೆರದ ಹುಡುಗನಿಗೇ ಕೊಟ್ಟು ಮದುವೆ ಮಾಡಿ ಮನೆ ಅಳಿಯನನ್ನಾಗಿ ಮಾಡಿಕೊಳ್ಳುವ ಯೋಚನೆ ದೇವಿಗಿದೆ. ಹಳ್ಳಿಯಲ್ಲಿರುವ ಸೋದರನನ್ನು ನೋಡಲು ಹೋದರೆ ನಾನು ಸುಧಾರಿಸಿರುವುದಾಗಿ ನುಡಿಯುತ್ತಾರೆ. ಕಷ್ಟಪಟ್ಟು ದುಡಿದರೆ ದಿನಾ 20-25 ರೂ. ಸಿಗುತ್ತದೆ. ಇದು ನನ್ನ ಹಳ್ಳಿಗಿಂತ ವಾಸಿ ಎಂದು ದೇವಿ ಹೇಳುತ್ತಾರೆ.

ಬರೋಡಾದ ಪ್ರತಾಪ್‌ನಗರ ರೈಲ್ವೆ ನಿಲ್ದಾಣದ ಬಳಿ ಇರುವ ಗಣೇಶ್‌ನಗರ 'ಬಸ್ತಿ' ಅತ್ಯಂತ ದೊಡ್ಡದು. ಈ 'ಬಸ್ತಿ'ಯ ಅಸ್ತಿತ್ವವೇ ರೈಲ್ವೆ ಅಧಿಕಾರಿಗಳ ಸತತ ಬೆದರಿಕೆಗೆ ಒಳಪಟ್ಟಿದೆ. ಈ ಬಸ್ತಿಯಲ್ಲಿ ಕೇವಲ 2-3 ಕೈಪಂಪಿನ ಬೋರ್‌ವೆಲ್ ಹಾಗೂ ಒಂದೆರಡು ನಲ್ಲಿಗಳಿವೆ. ಇವು 400 ಹೆಚ್ಚಿನ ಮನೆಗಳ ಅಗತ್ಯ ಪೂರೈಸಬೇಕು. ನಲ್ಲಿಗಳ ಮುಂದಿನ ದೊಡ್ಡ ಸಾಲು ಮಹಿಳೆಯರ ಮಧ್ಯದ ಜಗಳಕ್ಕೆ ಕಾರಣ ಆಗುವುದರಲ್ಲಿ ಅಚ್ಚರಿಯೇನಿಲ್ಲ. ಸ್ಥಳೀಯ ಗೂಂಡಾಗಳು ನಲ್ಲಿ ತಮ್ಮದೇ ಆಸ್ತಿ ಎನ್ನುವ ರೀತಿ ವರ್ತಿಸುವ ಪ್ರಕರಣಗಳೂ ಇವೆ. ಚರಂಡಿ ವ್ಯವಸ್ಥೆಯ ಕೊರತೆ ಮತ್ತೊಂದು ದೊಡ್ಡ ಸಮಸ್ಯೆ. ಪ್ರತಿ ಮನೆಯ ಮುಂದೆ ಸಣ್ಣ ಹಳ್ಳ ತೋಡಿ ಕೊಳೆ ನೀರನ್ನು ಸಂಗ್ರಹಿಸಲಾಗುತ್ತದೆ. ಹಳ್ಳ ತುಂಬುತ್ತಿದ್ದಂತೆ ಇಡೀ ಮನೆ ಅದರ ಕೆಟ್ಟ ವಾಸನೆಯಿಂದ ತುಂಬುತ್ತದೆ. ಹಳ್ಳ ತುಂಬಿದಾಗ ಆ ಕೊಳಕು ನೀರನ್ನು ಪಾತ್ರೆಯಲ್ಲಿ ತುಂಬಿ ಹೊರ ಹರಿದು ಸ್ವಚ್ಛ ಮಾಡಲಾಗುತ್ತದೆ. ಆ ಹಳ್ಳ ಮತ್ತೆ ಕೊಳೆ ನೀರು ಸಂಗ್ರಹಕ್ಕೆ ಸಿದ್ಧವಾಗುತ್ತದೆ.

ಈ ಕೊಳಕು ನೀರಿನ ಸಂಗ್ರಹ ಹಾಗೂ ಸುರಿಯುವ ಕೆಲಸ ಮಹಿಳೆಯರದು. ಮನೆ ಯಜಮಾನಿ ಈ ಕೆಲಸ ಮಾಡಲಿಕ್ಕಾಗದಿದ್ದಲ್ಲಿ ಹಿರಿ ಮಗಳು ಈ ಕೆಲಸ ಮಾಡುತ್ತಾಳೆ. ಈ ಕ್ರಿಯೆ ಈ ಮಹಿಳೆಯರಿಗೆ ಹಾಗೂ ಇಡೀ ಕುಟುಂಬದ ಆರೋಗ್ಯಕ್ಕೆ ಹಾನಿಕಾರಕವಾದದ್ದು ಎಂಬುದರಲ್ಲಿ ಸಂಶಯವಿಲ್ಲ. ಶೌಚಾಲಯಗಳ ಕೊರತೆ ಮತ್ತೊಂದು ಸಾಮಾನ್ಯ ದೂರು. ಜನಸಂದಣಿಯಿಂದಾಗಿ ಮಹಿಳೆಯರು ಶೌಚ ಅಗತ್ಯಗಳಿಗಾಗಿ ಒಂದು ಮೈಲಿವರೆಗೆ ನಡೆಯಬೇಕಾದ ಸಂದರ್ಭಗಳಿವೆ. ಹೀಗಾಗಿ ಬೆಳಗಿನ ಜಾವ ಅಥವಾ ರಾತ್ರಿಗಾಗಿ ಕಾಯಬೇಕು. ಇಂತಹ ಸಂದರ್ಭಗಳಲ್ಲಿ ಮಹಿಳೆಯರ ಮೇಲೆ ದುರಾಚಾರ ನಡೆದ ಪ್ರಸಂಗಗಳೂ ಇವೆ. ಶೌಚಾಲಯಗಳ ಕೊರತೆ ಮಹಿಳೆಯರಲ್ಲಿ ನಾನಾ ಆರೋಗ್ಯ ಸಮಸ್ಯೆಗಳಿಗೂ ಕಾರಣವಾಗುತ್ತಿದೆ.

ಗ್ರಾಮಗಳಲ್ಲಿದ್ದ ನಿರುದ್ಯೋಗ ಸಮಸ್ಯೆ, ಆದಾಯದ

ಕೊರತೆ ನಗರಗಳಿಗೆ ಸ್ಥಳಾಂತರಗೊಂಡ ನಂತರವೂ ಮುಂದುವರಿದಿರುವ ಬಗ್ಗೆ ಅನೇಕ ಮಹಿಳೆಯರು ಹೇಳುತ್ತಾರೆ. ಆದಾಯ ಸೃಷ್ಟಿಯ ಆಯ್ಕೆಗಳು ಸ್ವಲ್ಪ ಮಟ್ಟಿಗೆ ಹೆಚ್ಚಾಗಿದ್ದರೂ ಅದೇ ಆರ್ಥಿಕ ಪರಿಸ್ಥಿತಿಯೇ ಸಾಮಾನ್ಯವಾಗಿ ಮುಂದುವರಿಯುತ್ತದೆ. ಕೆಲವೊಮ್ಮೆ ಪೂರ್ಣ ಭಿನ್ನವಾದ ಉದ್ಯೋಗ ಆಯ್ದುಕೊಳ್ಳುವಂತಹದ್ದಾಗಿರುತ್ತದೆ. ಉದಾಹರಣೆಗೆ ಕಟ್ಟಡ ನಿರ್ಮಾಣ ಕೂಲಿ ಕೆಲಸ, ಚಿಂದಿ ಆಯುವುದು, ದಿನಗೂಲಿ - ಇಂತಹವಷ್ಟೇ ಆ ಆಯ್ಕೆಗಳಾಗಿರುತ್ತದೆ.

ಬಹುತೇಕ ಹೆಂಗಸರು ಬಾಲ್ಯ ವಿವಾಹದ ಕುರಿತು ಹೇಳುತ್ತಾರೆ. 8-14 ವರ್ಷಕ್ಕೆಲ್ಲಾ ವಿವಾಹವಾಗುತ್ತದೆ. ಹೊಸ ಪರಿಸರಕ್ಕೆ ಸಣ್ಣ ವಯಸ್ಸಿನಲ್ಲಿ ಹೊಂದಿಕೊಳ್ಳಬೇಕಾದ ಕಷ್ಟಗಳನ್ನು ಕುರಿತು ಯಾರೂ ಹೇಳುವುದಿಲ್ಲ. ವಿವಾಹ ಪತಿಯ ಮನೆಯಲ್ಲಿ ಹೊಂದಿಕೊಳ್ಳಬೇಕಾದ ಅನಿವಾರ್ಯತೆ ಕುರಿತು ಇರುವ ನಂಬಿಕೆಗಳು ಅವರನ್ನು ಈ ದಿಸೆಯಲ್ಲಿ ಮೌನಿಯಾಗಿಸಿವೆ.

ಅನೇಕ ಬಸ್ತಿಗಳು ಇಳಿಜಾರು ಪ್ರದೇಶಗಳಲ್ಲಿ ಇರುವುದರಿಂದ ಮಳೆಗಾಲದಲ್ಲಿ ಈ ಜನರ ಪಾಡು ಅತ್ಯಂತ ಶೋಚನೀಯ. ಪ್ರತಿ ಮಳೆಗಾಲದಲ್ಲೂ ಇಡೀ ಮನೆಗಳ ಸಾಲು ಕೊಳಕು ನೀರಿನಿಂದ ತುಂಬಿಹೋಗುತ್ತದೆ. ನೆಲೆ ನಿಂತ ನೀರು ಸೊಳ್ಳೆಗಳ ಸೃಷ್ಟಿಗೆ ಕಾರಣವಾಗುತ್ತದೆ.

ಅನೇಕ ಬಸ್ತಿಗಳ ಮಧ್ಯದಲ್ಲಿರುವ ಮದ್ಯದಂಗಡಿಗಳು ಮಹಿಳೆಯರಿಗೆ ಇನ್ನೂ ಹಲವು ರೀತಿಯ ಸಮಸ್ಯೆಗಳನ್ನು ಸೃಷ್ಟಿಸಿದೆ. ಮದ್ಯದಂಗಡಿಗಳನ್ನು ನಡೆಸುವ ಪುರುಷರನ್ನು ಕಂಡರೆ ಹೆದರುತ್ತಾರೆ. ಅವರ ವಿರುದ್ಧ ಮಾತಾಡಲೂ ಈ ಮಹಿಳೆಯರು ಹೆದರುತ್ತಾರೆ. ಮದ್ಯದಂಗಡಿಗಳಿಂದಾಗಿ ಪೊಲೀಸರೂ ಶೋಧನೆಯ ನೆಪದಲ್ಲಿ ದಾಳಿ ಮಾಡುತ್ತಾರೆ. ಆಗೆಲ್ಲಾ ಅವರು ಮನೆಗಳಿಗೆ ನುಗ್ಗಿ, ಮಹಿಳೆಯರ ವಿರುದ್ಧ ದುರಾಚಾರ ಎಸಗಿ ಮನೆಗಳಲ್ಲಿ ಮದ್ಯ ಮುಚ್ಚಿಟ್ಟಿರುವುದಾಗಿ ಆಪಾದಿಸಿ ಬೆದರಿಸುತ್ತಾರೆ. ಇಂತಹ ಘರ್ಷಣೆಗಳು ತೀರಾ ಸಾಮಾನ್ಯ. ಮಹಿಳೆಯರು ಇಂತಹ ಅನುಭವಗಳನ್ನು ಇಷ್ಟಪಡುವುದಿಲ್ಲ.

ಹಲವು ವರ್ಷಗಳು 'ಬಸ್ತಿ'ಗಳಲ್ಲಿ ಬದುಕಿದರೂ ತಮ್ಮ ಆಚರಣೆಗಳನ್ನು ಕೈಬಿಡುವುದಿಲ್ಲ ಎಂದು ಅನೇಕ ಮಹಿಳೆಯರು ಹೇಳುತ್ತಾರೆ. ಮದುವೆಯಂತಹ ಸಂಗತಿಗಳಿಗೆ ತಮ್ಮ 'ದೇಶ್'ಗೇ ಹೋಗುವುದಾಗಿ ಈ ಮಹಿಳೆಯರು ವಿವರಿಸುತ್ತಾರೆ.

ನಗರ ಜೀವನದ ಬದುಕಲ್ಲಿ, ಸಮುದಾಯದ ಬೆಂಬಲವಿಲ್ಲದೆ ಬದುಕುವ ಸ್ಥಿತಿ ಈ ಮಹಿಳೆಯರದಾಗಿರುತ್ತದೆ. ಕುಟುಂಬ ಹಾಗೂ ಬಂಧುಗಳ ಸಂಬಂಧಗಳಲ್ಲಿ ಅಂತರವಿರುತ್ತದೆ. ಔಪಚಾರಿಕ, ಸಾಮಾಜಿಕ ಸಂಬಂಧದಾಚೆಗಿನ ಆತ್ಮೀಯತೆ ಹೊಂದುವುದನ್ನು ಯಾರೂ ಇಷ್ಟಪಡಲಾರರು. ಹಣದ ಅಗತ್ಯವಿದ್ದಾಗ ನೆರೆ ಹೊರೆಯವರು, ಅಂಗಡಿಯವರು ಅಥವಾ ಲೇವಾದೇವಿಯರ ಬಳಿ ಹೋಗುತ್ತಾರೆ.

ಜಾತಿ ಪದ್ಧತಿ ತೀರಾ ಕಟ್ಟುನಿಟ್ಟಿನದಾಗಿರುತ್ತದೆ ಎಂದೂ ಈ ಮಹಿಳೆಯರು ಹೇಳುತ್ತಾರೆ. ಹಳ್ಳಿಯ ಜೊತೆಗಿನ ಸಂಬಂಧ ವಿವಾಹ ಅಥವಾ ಮತ್ತಿತರ ಇಂತಹ ಘಟನೆಗಳಿಗೆ ಸೀಮಿತವಾಗಿರುತ್ತದೆ. ಸಮುದಾಯದ ಬೆಂಬಲ ಇಲ್ಲದಿರುವುದರಿಂದ ಕೌಟುಂಬಿಕ ಹಿಂಸಾಚಾರ ಸಾಮಾನ್ಯವಾಗಿರುತ್ತದೆ. ಪುರುಷರ ಕುಡಿತದ ಚಟಗಳು ಈ ಹಿಂಸಾಚಾರವನ್ನು ಹೆಚ್ಚಾಗಿಸುತ್ತದೆ. ಇಂತಹ ಸಂದರ್ಭಗಳಲ್ಲಿ ಹಿಂಸಾಚಾರಕ್ಕೊಳಗಾದ ಮಹಿಳೆ ಅದನ್ನು ತಾನೇ ನಿಭಾಯಿಸಿಕೊಳ್ಳಬೇಕಾಗುತ್ತದೆ. ಸಮುದಾಯದ ಮಧ್ಯ ಪ್ರವೇಶವನ್ನು ಇಲ್ಲಿ ನಿರೀಕ್ಷಿಸಲಾಗದು. ಮದ್ಯದಂಗಡಿ ನಡೆಸುವವರೂ ಆರ್ಥಿಕ ಸಹಾಯ ನೀಡುವ ಮೂಲಕ ತನ್ನ ಅಧಿಕಾರ ಸ್ಥಾಪಿಸುವುದು ಸೋಜಿಗದ ಸಂಗತಿಯಾಗಿರುತ್ತದೆ.

ಬರೋಡಾದ ಹೊರವಲಯದಲ್ಲಿರುವ ಸಯಾಜಿ ಪಾರ್ಕ್‌ನಲ್ಲಿ ಬೇರೆಡೆಯಿಂದ ತೆರವು ಮಾಡಿಸಿಕೊಂಡು ಸ್ಥಳಾಂತರಗೊಂಡ ಕುಟುಂಬಗಳು ಹೆಚ್ಚಿವೆ. ಬರೋಡಾದ ವಿವಿಧ ಬಸ್ತಿಗಳ ಕುಟುಂಬಗಳಿಗೆ ನಗರ ಪಾಲಿಕೆಯವರು ಏನೊಂದೂ ಸೌಲಭ್ಯವಿಲ್ಲದ ಇಲ್ಲಿ ಪುನರ್ವಸತಿ ಕಲ್ಪಿಸಿದ್ದಾರೆ.

ಬೇರೆಡೆಯಿಂದ ಸ್ಥಳಾಂತರಗೊಂಡು ಪುನರ್ವಸತಿಗೊಳ್ಳುವ ಪ್ರಕ್ರಿಯೆಯಲ್ಲಿನ ನೂರಾರು ನೋವುಗಳು, ಆತಂಕ, ಕಳವಳಗಳನ್ನು ಈ ಮಹಿಳೆಯರು ಹೇಳುತ್ತಾರೆ. ಕೆಲವೊಮ್ಮೆ ತೆರವು ನೋಟಿಸ್ ನೀಡಲಾಗುತ್ತದೆ; ಕೆಲವೊಮ್ಮೆ ಯಾವ ನೋಟಿಸ್ ಸಹ ಇಲ್ಲದೆ ಕಾರ್ಪೋರೇಷನ್‌ನ ಬುಲ್‌ಡೋಜರ್ ಗುಡಿಸಲುಗಳನ್ನು ನೆಲಸಮ ಮಾಡುವುದನ್ನು ನೋವಿನಿಂದ ಹೇಳುತ್ತಾರೆ. ತಮ್ಮ ಗುಡಿಸಲು ಬುಲ್‌ಡೋಜರ್‌ಗೆ ಆಹುತಿಯಾದಾಗ ಕಾಯಿಲೆಯಿಂದ ಆಸ್ಪತ್ರೆ ಸೇರಿದ್ದ ಪತಿಯ ಜೊತೆ ಆಸ್ಪತ್ರೆಯಲ್ಲಿ ಇದ್ದುದಾಗಿ ಸ್ಮಿತಾ ಹೇಳುತ್ತಾಳೆ. "ತಂಗಿ ಒಂದು ವಿಷಯ ತಿಳಿಸಿದಳು. ಗುಡಿಸಲು ಬಳಿ ಹೋದಾಗ ಎಲ್ಲವೂ ಮುಗಿದು ಹೋಗಿತ್ತು" ಎಂದೂ ಸ್ಮಿತಾ ನೋವಿನಿಂದ ಹೇಳುತ್ತಾಳೆ. ನಂತರ ಪ್ರತಿಭಟನೆ ಮೆರವಣಿಗೆ ಎಲ್ಲಾ ನಡೆಯಿತು. ಕಡೆಗೆ ಕಾರ್ಪೊರೇಟರ್ ಒಬ್ಬನ ಸಹಾಯದಿಂದ ಸಯಾಜಿ ಪಾರ್ಕ್‌ನಲ್ಲಿ ಇರಲು ಜಾಗ ಸಿಕ್ಕಿದುದಾಗಿಯೂ ಆಕೆ ಹೇಳುತ್ತಾಳೆ.

ಬೆಳಗಿನ ವೇಳೆ ತರಕಾರಿ ಹೆಚ್ಚುತ್ತಿದ್ದಾಗ ಬಂದ

ಕಾರ್ಪೊರೇಷನ್ ದೂತರು ಮನೆ ಉರುಳಿಸಿದುದಾಗಿ ಕಿನ್ನರಿ ಹೇಳುತ್ತಾಳೆ. ನೋಟಿಸ್ ಬಂದಿದ್ದಿರಬಹುದು. ಆದರೆ ಎಲ್ಲರಿಗೂ ಅದು ತಿಳಿದಿರಲಿಲ್ಲ. ಮನೆ ಉರುಳಿಸುವುದನ್ನು ಪ್ರತಿಭಟಿಸಿದವರನ್ನು ಪೊಲೀಸರು ಬಂಧಿಸಿ ಕರೆದೊಯ್ದರು. ದೀರ್ಘ ಹೋರಾಟದ ನಂತರ ಪರ್ಯಾಯ ಜಾಗ ಸಿಕ್ಕಿತು ಎಂದೂ ಕಿನ್ನರಿ ಮಡಿಯುತ್ತಾಳೆ.

ಮುರಿದ ಮನೆಗಳು, ಮನೆಯಿಲ್ಲದ ಅತಂತ್ರ ಸ್ಥಿತಿ, ಪೊಲೀಸ್ ಕ್ರಿಯೆಯ ಭೀತಿ, ಅನಿಶ್ಚತೆಯಿಂದ ತುಂಬಿದ ಇಡೀ ಅನುಭವಗಳನ್ನು ನೋವು ತುಂಬಿ ನಿರೂಪಿಸುತ್ತಾರೆ ಈ ಮಹಿಳೆಯರು.

ಕೊಳೆಗೇರಿಗಳನ್ನು ತೆರವು ಮಾಡಿಸುವ ಸರ್ಕಾರದ ಕ್ರಿಯೆ ಸಾಮಾನ್ಯವಾಗಿ ಮಾನವೀಯ ಹಕ್ಕುಗಳ ನೇರ ಉಲ್ಲಂಘನೆಯಾಗಿರುತ್ತದೆ. ಹಲವು ಸಲ ನೋಟಿಸ್ ಸಹ ನೀಡುವುದಿಲ್ಲ. ಅಲ್ಲದೆ ಬಡವರ ಬಗ್ಗೆ ಪೂರ್ಣ ನಿರ್ಲಕ್ಷ್ಯವನ್ನು ತೋರಲಾಗುತ್ತದೆ. ಜನರನ್ನು ತೆರವು ಮಾಡಿಸಲು ಬಲಪ್ರಯೋಗ ಇರಬಾರದೆಂಬ ವಿಶ್ವ ಸಂಸ್ಥೆ ಘೋಷಣೆಯ ಉಲ್ಲಂಘನೆ ಆಗಿರುತ್ತದೆ ಇದು.

ಸ್ಥಳಾಂತರಗೊಡ ಸಮುದಾಯಗಳು ನಗರಗಳಲ್ಲಿ ಕೌಶಲದ ಕೆಲಸಗಳನ್ನು ನಿಭಾಯಿಸಲು ಶಕ್ತರಾಗಿರುವುದಿಲ್ಲ. ಬಹುತೇಕ ಮಂದಿ ಕೌಶಲ ಇಲ್ಲದ ಯಾವುದಾದರೂ ದಿನಗೂಲಿ ಕೆಲಸ ಅಥವಾ ಕಟ್ಟಡ ಕಾರ್ಮಿಕರಾಗಿ ಕೆಲಸ ಮಾಡುತ್ತಾರೆ. ಕ್ರಮೇಣ ಗ್ರಾಮೀಣ ಸಮುದಾಯದ ಅಂಗವಾಗಿದ್ದಾಗ ಹೊಂದಿದ್ದ ಪಾರಂಪರಿಕ ಕೌಶಲಗಳನ್ನು ಕಳೆದುಕೊಳ್ಳುತ್ತಾ ಬರುತ್ತಾರೆ. ಇದು ಜಾತಿ ಆಧಾರಿತ ಉದ್ಯೋಗಗಳಿಂದ ಹೊರಬಂದು ಜಾತ್ಯತೀತಗೊಳಿಸುವ ಕ್ರಮ ಎಂದು ಒಂದು ಮಟ್ಟದಲ್ಲಿ ಹೇಳಬಹುದು. ಮತ್ತೊಂದು ಮಟ್ಟದಲ್ಲಿ, ಸ್ಥಳಾಂತರವೆಂದರೆ ಕೌಶಲ ಕಳೆದುಕೊಳ್ಳುವುದು ಎಂದೂ ಅರ್ಥೈಸಬಹುದು. ಜಾತ್ಯಾತೀಯ ಅಂಶ ಎಲ್ಲಾ ಸಂದರ್ಭಗಳಲ್ಲೂ ಇರುವುದಿಲ್ಲ. ಏಕೆಂದರೆ ಜಾತಿ ಸೂಚಕಗಳು ಇತರ ಕ್ಷೇತ್ರಗಳಲ್ಲಿ ಸ್ಪಷ್ಟವಾಗಿರುತ್ತದೆ; ಅಲ್ಲದೆ ಹೊಸ ಆಯಾಮಗಳನ್ನು ಪಡೆದು ಕೊಳ್ಳುತ್ತದೆ.

ಕೊಳೆಗೇರಿಗಳಲ್ಲಿನ ಮಹಿಳೆಯರ ಅಸಹಾಯಕತೆ ಆಧಾರವಾದ ಮಕ್ಕಳನ್ನು ಶಾಲೆಗೆ ಸೇರಿಸಲು ಇಷ್ಟಪಡುವ ತಾಯಂದಿರು ಸ್ಥಳಾಂತರದ ಸಮಸ್ಯೆಯಿಂದ ಮತ್ತಷ್ಟು ಅಸಹಾಯಕತೆಗೆ ಈಡಾಗುತ್ತಾರೆ. ಶಾಲಾ ಪ್ರವೇಶಕ್ಕೆ ಅಗತ್ಯವಾದ ಜನನ ಪ್ರಮಾಣ ಪತ್ರಗಳನ್ನು ಸ್ಥಳಾಂತರದ ಗೊಂದಲಲ್ಲಿ ಕಳೆದುಕೊಳ್ಳುತ್ತಾರೆ. ಅಥವಾ ಅಜ್ಞಾನದಿಂದ ಸಂಬಂಧಿಸಿದ ಆಸ್ಪತ್ರೆ ಅತವಾ ಕಾರ್ಪೊರೇಷನ್‌ನಿಂದ ತೆಗೆದುಕೊಂಡಿರುವುದೇ ಇಲ್ಲ. ಸರಕಾರದ ಹಣಕಾಸಿನ ಯೋಜನೆಗಳ ಬಗ್ಗೆ ಈ ಮಹಿಳೆಯರಿಗೆ ಅರಿವಿರುತ್ತದೆ. ಆದರೆ ಅದನ್ನು ಪಡೆದುಕೊಳ್ಳುವುದು ಅವರಿಗೆ ತಿಳಿದಿರುವುದಿಲ್ಲ. ಕಚೇರಿಗಳಿಗೆ ಪದೇ ಪದೇ ಅಲೆದಾಡುವುದೂ ಅವರ ಪರಿಸ್ಥಿತಿಯಲ್ಲಿ ಸಾಧ್ಯವಿರುವುದಿಲ್ಲ.

ಸ್ಥಳಾಂತರಗೊಳ್ಳುವುದನ್ನು ತಪ್ಪಿಸಿಕೊಳ್ಳುವುದಕ್ಕಾಗಿ ಕೊಳೆಗೇರಿ ಜನರು ಅನೇಕ ಕಾರ್ಯತಂತ್ರಗಳನ್ನು ರೂಪಿಸಿ ಕೊಂಡಿದ್ದಾರೆ. ಕೆಲವರು ವೈಯಕ್ತಿಕ ಮಟ್ಟದಲ್ಲಿ ಮಕ್ಕಳ ಮದುವೆ ನಿಶ್ಚಯಿಸುತ್ತಾರೆ. ಇದರಿಂದ ಸ್ವಲ್ಪ ಕಾಲ ನಾವು ಕಷ್ಟಪಟ್ಟು ಕಟ್ಟಿದ ಮನೆಯನ್ನು ಬಿಡುವುದಕ್ಕೆ ಸಮಯ ಸಿಗುತ್ತದೆ ಎಂಬ ನಿರೀಕ್ಷೆ ಇಟ್ಟುಕೊಳ್ಳುತ್ತಾರೆ. ಕೆಲವಷ್ಟು ಜನರು ಕಾರ್ಪೊರೇಷನ್ ಸಂದರ್ಶಿಸಿ, ತಮ್ಮ ಬೇಡಿಕೆಗಳಿಗಾಗಿ ಹೋರಾಡುತ್ತಾರೆ. ಮತ್ತೆ ಕೆಲವರು ನ್ಯಾಯಲಯದ ಮೊರೆ ಹೋಗುತ್ತಾರೆ.

ಈ ಎಲ್ಲಾ ಕಾರ್ಯತಂತ್ರಗಳು ತಾತ್ಕಾಲಿಕ ಉಪಶಮನ ನೀಡಬಲ್ಲುದು. ಸ್ಥಳಾಂತರ ಬವಣೆಗೆ ಸಿಲುಕಿರುವ ಜನರು ರಾಜ್ಯದ ಯೋಜನೆಗಳಲ್ಲಿ ತಮ್ಮ ಅಭಿಪ್ರಾಯ ಸೇರಿಸುವಂತೆ ಇರಬೇಕು. ಇಲ್ಲದಿದ್ದಲ್ಲಿ ಈ ಎಲ್ಲಾ ತೆರವು ಮಾಡಿಸುವ ಪ್ರಕ್ರಿಯೆ ಬಲಾತ್ಕಾರದ್ದಾಗುತ್ತೆ; ಸಾವಿರಾರು ಜನರ ಮೇಲೆ ಅಪರಾಧ ಎಸಗಿದ ತಪ್ಪಿಗೆ ಸರ್ಕಾರ ಗುರಿಯಾಗುತ್ತದೆ.

ಕಾನೂನಿನಲ್ಲಿರುವ ನಗರದ ಬಡ ಜನರ ವಿರೋಧಿ ಭಾವನೆಗಳೊಳಗೆ ತಿದ್ದುಪಡಿ ಆಗಬೇಕು. ಕಾನೂನು ಶೂನ್ಯದಲ್ಲಿ ರಚಿತವಾಗುವುದಿಲ್ಲ. ಸಮಾಜದಲ್ಲಿರುವ ಪೂರ್ವಗ್ರಹಗಳು ಕಾನೂನು ವ್ಯವಸ್ಥೆಗೂ ಸೇರ್ಪಡೆಯಾಗುತ್ತದೆ.

ನಗರದ ಬಡವರನ್ನು ಪ್ರತಿನಿಧಿಸುವ ಸಂಘಟನೆಗಳ ಜಾಲವನ್ನು ಸ್ಥಾಪಿಸುವುದಲ್ಲದೆ, ನೀತಿ ನಿರೂಪಣೆ ಹಾಗೂ ಯೋಜನಾ ಹಂತಗಳಲ್ಲೆಲ್ಲ ಈ ಸಂಘಟನೆಗಳ ಅಭಿಪ್ರಾಯಗಳನ್ನು ಗಮನಕ್ಕೆ ತಂದುಕೊಳ್ಳಲು ಸರ್ಕಾರದ ಮೇಲೂ ಒತ್ತಡ ಹೇರಬೇಕು. ಸ್ಥಳಾಂತರದಂತಹ ವಿಚಾರದಲ್ಲಿ ಜನರ ಸಲಹೆ ಪಡೆದು ಅವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕು ಎಂಬುದನ್ನು ಸರ್ಕಾರಕ್ಕೆ ಅರ್ಥ ಮಾಡಿಸಬೇಕು. ಇದಕ್ಕಾಗಿ ಪ್ರತಿ ನಗರದಲ್ಲೂ ಮುನಿಸಿಪಲ್ ಕಾರ್ಪೊರೇಷನ್ ಜೊತೆ ಶಿಕ್ಷಣ ಹಾಗೂ ಸಂಧಾನದ ಪ್ರಕ್ರಿಯೆ ಆರಂಭಿಸುವುದು ಮುಖ್ಯ.

*– ಸಿ. ಜಿ. ಮಂಜುಳಾ*

# ನಿರ್ಲಕ್ಷ್ಯದಿಂದ ಸಾವಿಗೆ ತುತ್ತಾದ ಸುಮತಿ

ಇದು ಸಾಂಪ್ರದಾಯಕವಾಗಿ ತಾಯಿ ತಂದೆ ಬಳಗದವರು ಒಪ್ಪಿ ನಿಶ್ಚಯಿಸಿ ಮಾಡಿದಂತಾ ಮದುವೆ.

ಹದಿನೆಂಟು ವರ್ಷದ ಸುಮತಿ ಸುದರ್ಶನನನ್ನು ಜೀವನದ ಸಹಭಾಗಿಯಾಗಿ ಪಡೆದಿದ್ದಳು. ಸುದರ್ಶನ್ ವರದಕ್ಷಿಣೆ, ಇತರೇ ಉಪಚಾರಗಳನ್ನು ಬಯಸದ ಹುಡುಗ. ಖಾಸಗಿ ಎಲೆಕ್ಟ್ರಾನಿಕ್ ಕಾರ್ಖಾನೆಯಲ್ಲಿ ಉದ್ಯೋಗಿಯಾಗಿದ್ದನು, ಸುಮತಿ ಅತ್ತೆ ಮನೆಯಲ್ಲಿ ಗಂಡ ಹೆಂಡತಿ ಇಬ್ಬರು ನೆಮ್ಮದಿಯಾಗಿ ಇದ್ದರು. ಬೇಸರವಾದಾಗ, ಸುಮತಿ ಸುದರ್ಶನ್ ಇಬ್ಬರು ಸುಮತಿಯ ತಾಯಿ ಮನೆಗೆ ಹೋಗಿ ಬರುತ್ತಿದ್ದರು. ಅವರ ಕುಟುಂಬ ಸಂತೋಷದಿಂದ ನಡೆದಿತ್ತು. ಇಷ್ಟರಲ್ಲಿ ಸುಮತಿ ಇಬ್ಬರು ಮಕ್ಕಳ ತಾಯಿಯಾಗಿದ್ದಳು.

ನಾಲ್ಕು ವರ್ಷಗಳು ಕಳೆದ ನಂತರ ಅವರ ಮನೆ ಕಾರ್ಖಾನೆಗೆ ದೂರವಿದ್ದಿದ್ದರಿಂದ ಸುದರ್ಶನ್ ಸುಮತಿ ತೀರ್ಮಾನಿಸಿ ಕಾರ್ಖಾನೆಯ ಹತ್ತಿರವೇ ಮನೆ ಮಾಡಿದರು. ಇದರಿಂದ ದಂಪತಿಗಳಿಬ್ಬರು ಬಹಳ ಸಂತೋಷಿಸಿದ್ದರು. ಗಂಡ ಪ್ರತಿಬಾರಿ ತಂದ ಹೊಸ ಸೀರೆಯನ್ನು ಸುಮತಿ ತಾಯಿಗೆ ತೋರಿಸುತ್ತಿದ್ದಳು. ಈ ಸಲವು ತಂದ ಹೊಸ ಸೀರೆ ತೋರಿಸಲು ಗಂಡ ಮಕ್ಕಳೊಡನೆ ಸುಮತಿ ತವರು ಮನೆಗೆ ಹೋಗಿ ತಂದೆ, ತಾಯಿಯೊಂದಿಗೆ ಸಂತೋಷದಿಂದ ಕಳೆದು ಬಂದಿದ್ದಳು.

ಒಂದು ಭಾನುವಾರ ಸಂಸಾರದ ಜೊತೆ ವಿರಾಮವಾಗಿ ಕಳೆಯುವಾಗ ಸುಮತಿಗೆ ಒಂದು ಯೋಚನೆ ಬಂದು, ಇಂದು ಏನಾದರೂ ವಿಶೇಷವಾದ ಅಡಿಗೆ ಮಾಡುತ್ತೇನೆ ಎಂದಳು. ಸುದರ್ಶನ್ ಅದಕ್ಕೆ ಬೇಕಾದ ಪದಾರ್ಥಗಳನ್ನು ತರಲು ಇಬ್ಬರು ಮಕ್ಕಳನ್ನು ಕರೆದುಕೊಂಡು ಹತ್ತಿರವೆ ಇದ್ದ ಅಂಗಡಿಗೆ ಹೋದ ಮೇಲೆ ಸುಮತಿ ಅಡಿಗೆ ಮನೆಯ ಕಡೆ ಹೋದಳು. ಅಡಿಗೆ ಮನೆ ಬಹಳ ಚಿಕ್ಕದಾಗಿದ್ದು, ಕತ್ತಲಾಗಿತ್ತು. ಸುಮತಿ ಸ್ಟೋವಿಗೆ ಸೀಮೆ ಎಣ್ಣೆ ಸುರಿದಳು. ಸ್ಟೋವ್ ತುಂಬಿ ಸೀಮೆ ಎಣ್ಣೆ ಕೆಳಗೆ ಸೋರಿತ್ತು. ಇದನ್ನು ತಿಳಿಯದ ಸುಮತಿ ಬೆಂಕಿಯನ್ನು ಹತ್ತಿಸಿದಾಗ ಸ್ಟೋವ್‌ನಿಂದ ಬೆಂಕಿಯ ಉಂಡೆಗಳು ಸುಮತಿಗೆ ಬಡಿದವು. ಹತ್ತಿದ ಬೆಂಕಿ ಸುಮತಿಯನ್ನು ಸುತ್ತುವರಿಯಿತು. ಅಡಿಗೆ ಮನೆಯಿಂದ ಹೊರಗೆ ಬರಲು, ಬೆಂಕಿಯಿಂದ ತಪ್ಪಿಸಿಕೊಳ್ಳಲು ಸುಮತಿ ಪ್ರಯತ್ನಿಸುತ್ತಿದ್ದಳು. ಅದೇ ವೇಳೆಗೆ ಹಿಂದಿರುಗಿ ಬಂದ ಗಂಡ ನೋಡುವಷ್ಟರಲ್ಲಿ ಸುಮತಿಯ ಕೈ ಮುಖ ಎದೆ ಕಾಲುಗಳಿಗೆ ಬೆಂಕಿ ಆವರಿಸಿತು. ಸುದರ್ಶನ್ ಕಂಬಳಿಯನ್ನು ತಂದು ಸುತ್ತಿ ಹೊರಗೆ ತಂದನು. ಮೊದಲು ಸುಮತಿಯ ತಾಯಿ ಮನೆಗೆ ಹೋಗಿ ಅವರ ತಾಯಿಯನ್ನು ಕರೆದುಕೊಂಡು, ಸೆಂಟ್‌ಜಾನ್ಸ್ ಆಸ್ಪತ್ರೆಗೆ ಹೋದರು. ಅಲ್ಲಿ ಪ್ರಥಮ ಚಿಕಿತ್ಸೆಯನ್ನು ಮಾಡಿಸಿದರು. ಆಸ್ಪತ್ರೆಗೆ ಸೇರಿಸಿಕೊಳ್ಳಬೇಕಾದರೆ 20,000ದಿಂದ 30,000 ರೂ.ಗಳಾಗುತ್ತದೆ. ಒಂದು ದಿನಕ್ಕೆ ಬೆಡ್‌ಚಾರ್ಜು 2,000 ರೂ.ಗಳಾಗುತ್ತದೆ ಎಂದು ಹೇಳಲಾಯಿತು. ಅಲ್ಲಿದ್ದ ಸಿಬ್ಬಂದಿ ವರ್ಗದವರು 24 ಘಂಟೆಗಳೊಳಗೆ ವಿಕ್ಟೋರಿಯಾ ಆಸ್ಪತ್ರೆಗೆ ತೆಗೆದುಕೊಂಡು ಹೋಗಿ, 90ಭಾಗದಷ್ಟು ಮೈ ಎಲ್ಲಾ ಸುಟ್ಟುಹೋಗಿದೆ, ನೀವು ವೃಥಾ ಶ್ರಮ ಪಡುತ್ತಿದ್ದೀರಿ ಎಂದರು. ಅವರು ವಿಕ್ಟೋರಿಯಾ ತಲುಪುವ ವೇಳೆಗೆ ಆರು ಗಂಟೆಗಳ ಕಾಲ ಕಳೆದಿತ್ತು. ವಿಕ್ಟೋರಿಯದಲ್ಲಿ ಈಕೆಯ ಸ್ಥಿತಿ ಬಹಳ ಕೈತಪ್ಪಿದೆ, ಅಡ್ಮಿಟ್ ಮಾಡಿಕೊಳ್ಳಲಾಗುವುದಿಲ್ಲಾ ಎಂದು ಸತಾಯಿಸಿದರು. ಕೊನೆಗೆ ಜವಾನನ ಕೈಬಿಸಿ ಮಾಡಿದ ಮೇಲೆ ಸುಮತಿಯನ್ನು ಒಳಗೆ ಸೇರಿಸಲಾಯಿತು. ಆಕೆಗೆ ಕೊಡುವ ಒಂದು ಚುಚ್ಚುಮದ್ದನ್ನು ಬರೆದುಕೊಟ್ಟರು. ಅದರ ಬೆಲೆ ಸಾವಿರ ರೂಪಾಯಿಗಳು. ಇದನ್ನು ಬರೆದುಕೊಟ್ಟವರು ಜೂನಿಯರ್ ಡಾಕ್ಟರ್. ಮಾರನೆ ದಿನ ಬೆಳಗ್ಗೆ ಬಂದ ಬೇರೆ ನರ್ಸ್ ಆಗಲಿ, ಡಾಕ್ಟರ್ ಆಗಲಿ ಯಾವ ರೀತಿಯ ಔಷಧ ಉಪಚಾರಗಳನ್ನು ಸುಮತಿಗೆ ನೀಡಲಿಲ್ಲ. ಸೀನಿಯರ್ ಡಾಕ್ಟರ್ ಬಂದರಾದರೂ ಬರೀ ನೋಡಿ ಹೋದರು, ಅವರು ಸಹ ಯಾವ ಔಷಧಿಗಳನ್ನು ಕೊಡಲಿಲ್ಲ.

ನಾಲ್ಕನೆ ದಿನ ಬೆಳಿಗ್ಗೆ 8-30ಕ್ಕೆ ಒಂದು ಚುಚ್ಚುಮದ್ದನ್ನು ಸುಮತಿಗೆ ಕೊಡಲಾಯಿತು. ಆ ಕ್ಷಣದಲ್ಲಿ ಸುಮತಿ ತನ್ನ ಕಣ್ಣುಗಳನ್ನು ಮುಚ್ಚಿಕೊಂಡಳು.

ಇದು ವಿಧಿಯೇ? ಅಥವಾ ಆಸ್ಪತ್ರೆಯ ಅವ್ಯವಸ್ಥೆಯೇ?

*- ವಿಮೋಚನಾ, ಮಹಿಳಾ ಹಕ್ಕುಗಳ ವೇದಿಕೆ*

*ಹಿಂದಿನ ಸಂಚಿಕೆಯಲ್ಲಿ ವರದಕ್ಷಿಣೆ ಬಗ್ಗೆ ಲೇಖನವನ್ನು ಪ್ರಕಟಿಸಲಾಗಿತ್ತು. ಈ ಹಿನ್ನೆಲೆಯಲ್ಲಿ ವಿಮೋಚನಾ ವೇದಿಕೆಯ ಅಧ್ಯಯನಕ್ಕೆ ಪೂರಕವಾದ ವಾಸ್ತವಿಕ ಘಟನೆಗಳು.*

# ಗಿರಿಜನ ಮಹಿಳೆಯರ ಹೋರಾಟ

ಮೈಸೂರು ಜಿಲ್ಲೆಯಲ್ಲೂ ಈ ಗಿರಿಜನರು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತಾರೆ. ಇವರನ್ನು ಜೇನುಕುರುಬ, ಕಾಡುಕುರುಬ ಮತ್ತು ಸೋಲಿಗರು ಎಂದು ಕರೆಯುತ್ತಾರೆ. ಗಿರಿಜನರಲ್ಲಿ ಹೆಂಗಸರು ವಿಶೇಷ ಪಾತ್ರ ಮತ್ತು ಸ್ಥಾನವನ್ನು ಹೊಂದಿರುತ್ತಾರೆ ಎಂದು ಓದಿದ್ದೆ ಕೇಳಿದ್ದೆ. ಆದರೆ ಎಂದೂ ಅವರನ್ನು ನೇರವಾಗಿ ನೋಡಿ ಮಾತನಾಡಿಸಿರಲಿಲ್ಲ. ಕೆಲವು ತಿಂಗಳುಗಳ ಹಿಂದೆ ಮೈಸೂರಿನಲ್ಲಿ ಕರ್ನಾಟಕ ರಾಜ್ಯ ಮಹಿಳಾ ಆಯೋಗ ಮತ್ತು ಗಿರಿಜನ ಕ್ರಿಯಾಕೂಟ ಸಮಿತಿಯವರು ಗಿರಿಜನ ಮಹಿಳೆಯರಿಗೋಸ್ಕರ ಏರ್ಪಡಿಸಿದ್ದ ಕಾರ್ಯಗಾರದಲ್ಲಿ ಅವರನ್ನು ನೋಡುವ, ಮಾತನಾಡುವ ಮತ್ತು ಅವರ ಬಗ್ಗೆ ತಿಳಿದುಕೊಳ್ಳುವ ಅವಕಾಶ ಸಿಕ್ಕಿತ್ತು. ಈ ಕಾರ್ಯಗಾರದ ವಿಶೇಷತೆಯೆಂದರೆ ಗಿರಿಜನ ಮಹಿಳೆಯರು ತಮ್ಮ ಸಮಸ್ಯೆ ಅನುಭವ ಮತ್ತು ಹೋರಾಟಗಳ ಬಗ್ಗೆ ತಾವೆ ಮಾತನಾಡಿದರು. ಇದರಿಂದ ಅವರ ನೋವು, ಅನುಭವಗಳು ಸಭಿಕರನ್ನು ನೇರವಾಗಿ ತಟ್ಟುವಂತಾಯ್ತು. ಕಾರ್ಯಗಾರದಲ್ಲಿ ಗಿರಿಜನ ಮಹಿಳೆಯರು ಹೇಳಿಕೊಂಡ ಸಮಸ್ಯೆ ಮತ್ತು ಹೋರಾಟಗಳನ್ನು ನಿಮ್ಮೊಂದಿಗೆ ಹಂಚಿಕೊಳ್ಳುವುದೆ ಈ ಲೇಖನದ ಮುಖ್ಯ ಉದ್ದೇಶ.

ಗಿರಿಜನ ಮಹಿಳೆಯರ ಸ್ಥಾನಮಾನ ಕುರಿತು ಸಂಕ್ಷಿಪ್ತವಾಗಿ ಹೇಳುವುದಾದರೆ ಆಧುನಿಕತೆ ಕಾಲಿಡುವ ಮುಂಚೆ ಅವರು ಸಾಮಾಜಿಕವಾಗಿ ಆರ್ಥಿಕವಾಗಿ ಪುರುಷರಿಗೆ ಸಮನಾದ ಸ್ಥಾನಮಾನವನ್ನು ಹೊಂದಿದ್ದರು. ಕುಟುಂಬದ ನಿರ್ವಹಣೆ ಮಾಡುತ್ತ ಆರ್ಥಿಕವಾಗಿಯೂ ಸ್ವಾವಲಂಬಿಗಳಾಗಿದ್ದರು. ಮನೆಕೆಲಸ, ಮಕ್ಕಳನ್ನು ನೋಡಿಕೊಳ್ಳುವುದು, ಎಲ್ಲವನ್ನೂ ಮಾಡಿ ಮುಗಿಸಿ ಕಾಡಿಗೆ ಹೋಗಿ ಅಲ್ಲಿ ಸಿಗುವ ಕಾಡಿನ ಉತ್ಪನ್ನಗಳನ್ನು ಆಯ್ದುಕೊಂಡು ಹತ್ತಿರದ ಪೇಟೆಗೆ ತೆಗೆದುಕೊಂಡು ಹೋಗಿ ಮಾರಾಟ ಮಾಡಿ ಹಣ ಸಂಪಾದಿಸುತ್ತಿದ್ದರು. ಸಂಪಾದಿಸಿದ ಹಣವನ್ನು ತಾವೇ ಖರ್ಚು ಮಾಡುತ್ತಿದ್ದರು. ಗಿರಿಜನರ ಸಂಸ್ಕೃತಿಯು ಇತರ ಸಂಸ್ಕೃತಿಗಳಿಂದ ಭಿನ್ನವಾದ ಸಂಸ್ಕೃತಿ ಹೊಂದಿದ್ದಾರೆ. ಹುಡುಗಿಯರು ತಾವು ಇಷ್ಟಪಟ್ಟವರನ್ನು ಮದುವೆ ಮಾಡಿಕೊಳ್ಳಬಹುದು. ಆದರೆ ಆಧುನಿಕತೆಯ ಪ್ರಭಾವ ಈ ಸಮಾಜದ ಮೇಲು ಆಗುತ್ತಿರುವುದರಿಂದ ಮಹಿಳೆಯರ ಸ್ಥಾನಮಾನ ಬದಲಾಗುತ್ತಿರುವುದು ಕಂಡುಬರುತ್ತಿದೆ.

ಹೊಸ ಆರ್ಥಿಕ ನೀತಿ, ಸರ್ಕಾರದ ದ್ವಂದ್ವ ನೀತಿಗಳು, ಮೇಲುವರ್ಗದ ಜನರ ದಬ್ಬಾಳಿಕೆ, ಆಧುನಿಕತೆಯನ್ನು ಮೈಗೂಡಿಸಿಕೊಳ್ಳಲಾಗದೆ ಬದಲಾವಣೆಯ ಹಂತದಲ್ಲಿರುವ ಪರಿಸ್ಥಿತಿಯಲ್ಲಿ ಗಿರಿಜನ ಮಹಿಳೆಯರು ಪುರುಷರಿಗಿಂತ ಹೆಚ್ಚಿನ ಗೊಂದಲ ಸಮಸ್ಯೆಗಳಿಗೆ ಗುರಿಯಾಗುತ್ತಿದ್ದು ಪರಿಹಾರಗಳಿಗೆ ಹೋರಾಟ ಮಾಡಬೇಕಾಗಿದೆ.

ಅವರು ಹೋರಾಡುತ್ತಿರುವ ಪ್ರಮುಖ ವಿಷಯಗಳಲ್ಲಿ ಭೂಮಿಯ ಹಕ್ಕನ್ನು ಪಡೆಯುವುದು ಒಂದು. ಕೆಲವು ವರ್ಷಗಳ ಹಿಂದೆ ಕಾಡು ಕಡಿಯುವುದಕ್ಕೆ ಅಥವಾ ಇವರ ಮನೆಗಳ ಹತ್ತಿರವೆ ಲೈಸೆನ್ಸ್ ಇರುವ ಸಾರಾಯಿ ಅಂಗಡಿಯನ್ನು ತೆರೆದಾಗ ಹೆಂಗಸರು ಗಲಾಟೆ ಮಾಡಿದರು. ಅಂಗಡಿಯನ್ನು ಮುಚ್ಚುವಂತೆ ಒತ್ತಾಯ ಮಾಡಿದರು. ಆದರೆ ಅಂಗಡಿ ಯಜಮಾನನಿಗೆ ಸ್ಥಳೀಯ MLA ಮತ್ತು ಹಳ್ಳಿಯ ಮುಖಂಡರ ಬೆಂಬಲವಿದ್ದುದರಿಂದ ಇವರು ಎಷ್ಟು ಹೋರಾಟ ಮಾಡಿದರು ಸಾರಾಯಿ ಮಾರಾಟವನ್ನು ನಿಲ್ಲಿಸುವುದರಲ್ಲಿ ಯಶಸ್ವಿಯಾಗಲಿಲ್ಲ. ಸಾಯುವವರೆಗೆ ಈ ಹೋರಾಟವನ್ನು ಮುಂದುವರೆಸುತ್ತೇವೆ ಎಂದು ಈ ಹೆಂಗಸರು ಹೇಳುತ್ತಾರೆ.

ಅರಣ್ಯಾಧಿಕಾರಿಗಳು, ಗಾರ್ಡ್‌ಗಳು, ಪೋಲೀಸರು ಮತ್ತು ಮೇಲುವರ್ಗದ ರೈತರು ಗಿರಿಜನ ಹೆಣ್ಣುಮಕ್ಕಳ ಮೇಲೆ ಮಾಡುವ ಅತ್ಯಾಚಾರ ಇವರು ಎದುರಿಸುತ್ತಿರುವ ಮತ್ತೊಂದು ಸಮಸ್ಯೆ. ಒಮ್ಮೆ ನಾಲ್ಕು ಜನ ಹೆಂಗಸರು ಸೌದೆ ಆಯಲು ಕಾಡಿಗೆ ಹೋಗಿದ್ದರು. ಸೌದೆ ಆಯುವಾಗ ಯಾವ ಮಾಯದಲ್ಲಿ ಜೀಪು ಬಂದಿತೊ ಇವರಿಗೆ ಗೊತ್ತಾಗಲಿಲ್ಲ. ಜೀಪಿನಲ್ಲಿದ್ದವರನ್ನ ನೋಡಿ ಹೆಂಗಸರು ಓಡಲು ಪ್ರಾರಂಭಿಸಿದರು. ಆದರೆ ಒಬ್ಬ ಹೆಂಗಸು ಅವರ ಕೈಗೆ ಸಿಕ್ಕಿಹಾಕಿಕೊಂಡಳು. ಕೈಕಾಲು ಹಿಡಿದು ಎಷ್ಟೆಲ್ಲ ಬೇಡಿಕೊಂಡರು ಜೀಪಿನಲ್ಲಿ ಹಾಕಿಕೊಂಡು ಹೋಗಿ ಅತ್ಯಾಚಾರ ಮಾಡಿದ್ದರು. ಕೇಸ್ ಹಾಕಿದಾಗ COD ತನಿಖೆಗೆ ಒಳಪಟ್ಟಿತು. ಆದರೆ ಅಪರಾಧಿಗಳಿಗೆ ಶಿಕ್ಷೆಯಾಗಲಿಲ್ಲ. ಅತ್ಯಾಚಾರಕ್ಕೊಳಗಾದ ಹೆಂಗಸಿಗೆ 10,000 ರೂ. ಪರಿಹಾರ ನೀಡಿದರು. ವಿಷಯ ತಿಳಿದಿದ್ದರು ಆಕೆಯ ಗಂಡ ಅವಳನ್ನೇ ಜೊತೆಯಲ್ಲೆ ಇಟ್ಟುಕೊಂಡಿದ್ದಾನೆ. ಚೆನ್ನಾಗಿ ನೋಡಿ ಕೊಳ್ಳುತ್ತಿದ್ದಾನೆ ಕೂಡ. ಘಟನೆ ನಡೆದು ಎಂಟು ಹತ್ತು ವರ್ಷಗಳಾದರು ಅಹಿಂಸೆಯನ್ನು ನೆನಸಿಕೊಂಡು ಆಕೆ ಹೇಳುವಾಗ ಅವಳಲ್ಲಿ ದುಃಖ ಉಮ್ಮಳಿಸಿ ಬರುತ್ತಿತ್ತು.

ಅದೇ ರೀತಿ ಗಿರಿಜನ ಹುಡುಗಿಯೊಬ್ಬಳು ನೀರು ತರಲು ಹೋಗುತ್ತಿದ್ದಾಗ ದನ ಕಾಯುವ ಹುಡುಗರು ಬಲಾತ್ಕಾರ ಮಾಡಿದ್ದರಿಂದ ಹುಡುಗಿ ಆತ್ಮಹತ್ಯೆ ಮಾಡಿಕೊಂಡಳು. ಆದರೆ ಅಪರಾಧಿಗಳಿಗೆ ಶಿಕ್ಷೆಯಾಗಲಿಲ್ಲ. ಈಗಲು ಗಿರಿಜನ ಹೆಣ್ಣು ಮಕ್ಕಳು ಮುಕ್ತವಾಗಿ ಓಡಾಡುವಂತಿಲ್ಲ.

ಚಿಕ್ಕವಯಸ್ಸಿನ ಅಂದರೆ 6ರಿಂದ 12 ವರ್ಷ ವಯಸ್ಸಿನ ಹೆಣ್ಣುಮಕ್ಕಳನ್ನು ಮಾರಾಟ ಮಾಡುವ ದಂದೆಯೊಂದು ಕೆಲವು ತಾಲ್ಲೂಕುಗಳಲ್ಲಿ ನಡೆಯುತ್ತಿದೆ. ಇನ್ನಾವುದೂ ವಾಣಿಜ್ಯ ಉದ್ದೇಶಕ್ಕೋಸ್ಕರ ಗಿರಿಜನರನ್ನು ಸ್ಥಳಾಂತರಿಸಿ ಬೇರೆ ಕಡೆ ಜಮೀನು ನೀಡಿತ್ತು. ಆಗಿನಿಂದಲೂ ಅವರು ಅದನ್ನು ಸಾಗುವಳಿ ಮಾಡಿಕೊಂಡು ಬಂದಿದ್ದಾರೆ. ಆದರೆ ಸರ್ಕಾರ ಇನ್ನು ಭೂಮಿಯನ್ನು ಇವರ ಹೆಸರಿಗೆ ನೋಂದಾಯಿಸಿ ಕೊಟ್ಟಿಲ್ಲ. ಸರ್ಕಾರಿ ಅಧಿಕಾರಿಗಳನ್ನು ಕೇಳಲು ಹೋದರೆ ಅವಾಗ ಬನ್ನಿ ಇವಾಗ ಬನ್ನಿ ಎಂದು ಅಲೆಸುತ್ತಲೆ ಇದ್ದಾರೆ. ಕೆಲವರು ಕಡಿಮೆ ಬೆಲೆಗೆ ರೈತರಿಗೆ ಮಾರಾಟ ಮಾಡಿದ್ದು, ಸರ್ಕಾರ ಹಣ ಕೊಟ್ಟು ಬಿಡಿಸಿಕೊಳ್ಳುವ ಕಾನೂನನ್ನು ಮಾಡಿದೆ. ಆದರೆ ರೈತರು ಭೂಮಿಯನ್ನು ಬಿಟ್ಟುಕೊಡದೆ ನ್ಯಾಯಾಲಯಕ್ಕೆ ಅಲೆಯ ಬೇಕಾಗಿದೆ. ಇದರ ಜೊತೆಗೆ ಮೇಲುವರ್ಗದವರು ಇವರ ಜಮೀನಿನ ಬೆಳೆಯನ್ನು ನಾಶಮಾಡುತ್ತಾರೆ. ಮರಗಳ ಫಂತಲನ್ನು ಕದ್ದೊಯ್ಯುತ್ತಾರೆ. ಅವರ ಬಗ್ಗೆ ಪೋಲೀಸರಿಗೆ ದೂರು ನೀಡಿದರೆ ಯಾವ ಕ್ರಮವನ್ನು ಕೈಗೊಳ್ಳುವುದಿಲ್ಲ. ಬದಲಾಗಿ ಇಬ್ಬರೂ ಸೇರಿಕೊಂಡು ಗಿರಿಜನರ ಮೇಲೆ ಆಕ್ರಮಣ ಮಾಡಿದರೆ ಮೊದಲು ಬಲಿಯಾಗುವುದು ಮಹಿಳೆಯರು. ಹೀಗೆ ಹತ್ತು ಹದಿನೈದು ವರ್ಷಗಳಿಂದ ಭೂಮಿಯನ್ನು ತಮ್ಮ ಹೆಸರಿಗೆ ಮಾಡಿಕೊಡಲು ಮತ್ತು ಕೈಬಿಟ್ಟು ಹೋದ ಜಮೀನನ್ನು ಮತ್ತೆ ಪಡೆಯಲು ಗಿರಿಜನರು ಅದರಲ್ಲೂ ಮಹಿಳೆಯರು ಹೋರಾಟ ಮಾಡುತ್ತಲೇ ಇದ್ದಾರೆ.

ಒಬ್ಬ ಮಹಿಳೆಗೆ ಸುಮಾರು 15 ವರ್ಷಗಳ ಹಿಂದೆ ನಾಲ್ಕು ಎಕರೆ ಭೂಮಿಯನ್ನು ಸರ್ಕಾರ ನೀಡಿತ್ತು. ಯಾವುದೋ ಕಾಯಿದೆಯನ್ವಯ ಸರ್ಕಾರ ಜಮೀನನ್ನು ಇವರಿಂದ ಕಸಿದುಕೊಂಡು ಬೇರೆಯವರಿಗೆ ಹೋಗುವಂತೆ ಮಾಡಿತು. ಈ ಮಹಿಳೆ ಕೋರ್ಟಿಗೆ ಹೋಗಿ ಜಮೀನನ್ನು ವಾಪಸ್ಸು ಕೊಡಿಸಬೇಕೆಂದು ಕೇಸು ಹಾಕಿದಳು. ನ್ಯಾಯಾಲಯ ಮಹಿಳೆಯ ಪರವಾಗಿ ಎಂಟು ಬಾರಿ ತೀರ್ಪನ್ನು ನೀಡಿತ್ತು. ಆದರೆ ಇವರ ಜಮೀನನ್ನು ಆಕ್ರಮಿಸಿಕೊಂಡ ಜನರು ಪ್ರಬಲವಾದ ಪ್ರಭಾವದಿಂದ ಮತ್ತೆ ಮತ್ತೆ ಸ್ಟೇ ಆರ್ಡರ್ ತಂದು ಈಗಲೂ ಜಮೀನು ಆಕೆಗೆ ಸಿಗದಂತೆ ಮಾಡುತ್ತಿದ್ದಾರೆ. ಕಷ್ಟಪಟ್ಟು ದುಡಿದಿದ್ದು, ಉಳಿಸಿದ್ದು ಎಲ್ಲವನ್ನು ಕೇಸ್‌ಗೆ ಖರ್ಚು ಮಾಡುತ್ತಾ ಆ ಹೆಂಗಸು ಪಡಬಾರದ ಕಷ್ಟ ಅನುಭವಿಸುತ್ತಿದ್ದಾರೆ.

ಗಿರಿಜನ ಮಹಿಳೆಯರು ಸಾರಾಯಿ ವಿರುದ್ಧ ಕೂಡ ಹೋರಾಟ ಮಾಡಿದ್ದಾರೆ. ಕೂಲಿ ಕೆಲಸಕ್ಕೆ ಹೋಗುವ ಗಂಡಸರು ಗಳಿಸಿದ ಹಣವನ್ನೆಲ್ಲ ಸಾರಾಯಿಗೆ ಹಾಕುತ್ತಾರೆ. ಊಟ ಬಟ್ಟೆಗೂ ಗತಿಯಿಲ್ಲದ ಹೆಣ್ಣುಮಕ್ಕಳಿಗೆ ಊಟ ಬಟ್ಟೆ ಮತ್ತು ಹಣದ ಆಸೆ ತೋರಿಸಿ ಮಂಗಳೂರು-ಬೆಂಗಳೂರು ಮತ್ತು ಬಾಂಬೆಗೆ ಕರೆದುಕೊಂಡು ಹೋಗಿ ಅಲ್ಲಿ ಶ್ರೀಮಂತರ ಮನೆಯಲ್ಲಿ ಕೆಲಸಕ್ಕಿಡಲು ಅವರನ್ನು ಮಾರಾಟ ಮಾಡುವ ಜಾಲವೊಂದು ಬೆಳೆಯುತ್ತಿದೆ. ಹುಣಸೂರು ತಾಲ್ಲೂಕಿನ ಒಂದು ಗಿರಿಜನ ಕಾಲೋನಿಯಲ್ಲಿ ಚೆನ್ನಾಗಿ ಪರಿಚಿತನಿರುವ ಒಬ್ಬ ಮಧ್ಯವರ್ತಿ ಬಂದು ತಂದೆ ತಾಯಿಗಳಿಗೆ ಹಣದ ಆಸೆ ತೋರಿಸಿ ಅವರ ಹೆಣ್ಣುಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳುವ ಜವಾಬ್ದಾರಿ ತನ್ನದೆಂದು ನಂಬಿಸಿ ಆರೇಳು ಹುಡುಗಿಯರನ್ನು ಕರೆದುಕೊಂಡು ಹೋದನು. ಮಂಗಳೂರಿನ ಯಾವುದೊ ಮನೆಯಲ್ಲಿ ಬಿಟ್ಟು ಈಗ ಬರುತ್ತೇನೆ ಎಂದು ಹೇಳಿ ಹೋದವನು ಬರಲೇ ಇಲ್ಲ. ಹುಡುಗಿಯರು ಅಳಲು ಶುರುಮಾಡಿದರು. ಅಷ್ಟರಲ್ಲಿ ಇನ್ನೊಬ್ಬ ವ್ಯಕ್ತಿ ಬಂದು ಅವರನ್ನು ಬೇರೆ ಬೇರೆ ಕಡೆ ಕರೆದುಕೊಂಡು ಹೋದನು. ಹುಡುಗಿಯರಿಗೆ ತಾವು ಎಲ್ಲೆಲ್ಲಿಗೆ ಹೋಗುತ್ತಿದ್ದೇವೆ ಎಂದು ತಿಳಿಯಲಿಲ್ಲ. ಒಬ್ಬರಿಗೊಬ್ಬರು ಸಂಪರ್ಕ ಬೆಳಸಲು ಸಾಧ್ಯವಾಗಲಿಲ್ಲ. ಹೀಗೆ ಹೋದವರಲ್ಲಿ ವಾಪಸ್ಸು ಬಂದ ಒಬ್ಬ ಹುಡುಗಿ ಹೇಳುವಂತೆ ಮಂಗಳೂರಿನಿಂದ ಬೆಂಗಳೂರಿಗೆ ಕರೆದುಕೊಂಡು ಹೋಗಿ ಒಬ್ಬರ ಮನೆಯಲ್ಲಿ ಕೆಲಸಕ್ಕಿಡಲಾಯಿತು. ಆ ಮನೆಯಲ್ಲಿ ಎಲ್ಲಾ ಕೆಲಸ ಮಾಡಿಸುತ್ತಿದ್ದರು. ಆದರೆ ಊಟ ಸರಿಯಾಗಿ ಕೊಡುತ್ತಿರಲಿಲ್ಲ. ಮನೆಯೊಡತಿಯಂತು ಆ ಹುಡುಗಿಯೇ ಹೇಳುವಂತೆ ಹುಚ್ಚುನಾಯಿಯ ತರ ನಡೆದುಕೊಳ್ಳುತ್ತಿದ್ದಳು. ಇಲ್ಲಿ ದಳ್ಳಾಳಿ ಹುಡುಗಿಯರ ತಂದೆತಾಯಿಗೆ ಸರಿಯಾಗಿ ಹಣವನ್ನು ಕೊಡದೆ ಕದ್ದುತಿರುಗಲು ಪ್ರಾರಂಭಿಸಿದನು. ಅನುಮಾನ ಬಂದು ತಂದೆತಾಯಿಗಳು ಮಕ್ಕಳನ್ನು ಹುಡುಕಲು ಪ್ರಾರಂಭಿಸಿದರು. ಅಷ್ಟರಲ್ಲಿ ಈ ಹುಡುಗಿಯನ್ನು ಬಾಂಬೆಗೆ ಕಳುಹಿಸಲಾಗಿತ್ತು. ಅಲ್ಲಿ ಮನೆಯವರು ಚೆನ್ನಾಗಿ ನೋಡಿಕೊಳ್ಳುತ್ತಿದ್ದರು. ಆದರೆ ಊರಿಗೆ ಹೋಗಬೇಕೆಂದರೆ ಕಳುಹಿಸಲಿಲ್ಲ. ಕೊನೆಗೆ ಹುಡುಗಿಯರ ತಂದೆತಾಯಿಗಳು ಸ್ಥಳೀಯ ಸ್ವಯಂ ಸೇವಾ ಸಂಸ್ಥೆಯ ಸಹಾಯದಿಂದ ಹುಡುಗಿಯರನ್ನು ಪತ್ತೆಹಚ್ಚಿ 5 ಹುಡುಗಿಯರನ್ನು ವಾಪಸ್ಸು ಕರೆದುಕೊಂಡು ಬಂದರು. ಆದರೆ ಒಬ್ಬ ಹುಡುಗಿ ಸಿಗಲೇ ಇಲ್ಲ. ಆ ಹುಡುಗಿಯ ತಾಯಿ ಮಗಳ ಯೋಚನೆಯಲ್ಲೇ ಖಾಯಿಲೆ ಬಿದ್ದಿದ್ದಾರೆ. ಮಾರಾಟವಾಗಿ ಹೋಗಿ ಬಂದ ಹುಡುಗಿ ಹೇಳುವಂತೆ ಅವರು ಹೋದ ಮನೆಗಳಲ್ಲಿ ಏನಿಲ್ಲವೆಂದರು ಊಟ ಬಟ್ಟೆಯಾದರು ಸಿಗುತ್ತದೆ. ಇಲ್ಲಿ ಅದೂ ಇಲ್ಲವಲ್ಲ. ಹಾಗಾಗಿ ಹೆಣ್ಣುಮಕ್ಕಳು ತಿಂಡಿ ಬಟ್ಟೆ

ವಸ್ತುಗಳ ಆಸೆಗೆ ಬಲಿಯಾಗಿ ಈ ಜಾಲದಲ್ಲಿ ಸಿಕ್ಕಿಹಾಕಿಕೊಳ್ಳುತ್ತಾರೆ.

ಕಾಡಿನ ಉತ್ಪನ್ನಗಳನ್ನು ಅವಲಂಬಿಸಿ ಜೀವನ ಮಾಡುತ್ತಿರುವ ಗಿರಿಜನ ಮಹಿಳೆಯರ ಜೀವನ ಮತ್ತಷ್ಟು ದುಸ್ತರವಾಗುತ್ತಿರುವುದು ಅರಣ್ಯಾಧಿಕಾರಿಗಳು ಹಾಗೂ ಗಾರ್ಡ್‌ಗಳ ಕಿರುಕುಳದಿಂದ. ಬುಟ್ಟಿ ಹೆಣೆಯುವುದು ಅವರ ಮುಖ್ಯ ಕಸುಬುಗಳಲ್ಲಿ ಒಂದು. ಅದಕ್ಕೆ ಬೇಕಾಗುವ ಬಿದಿರನ್ನು ಕಾಡಿನಿಂದ ತರುತ್ತಾರೆ. ಒಮ್ಮೆ ಬಿದಿರು ತರಲು ಹೋದ ವ್ಯಕ್ತಿಗೆ ಫಾರೆಸ್ಟರ್ ಹೊಡೆದುಬಡಿದು ಮಾಡಿದ್ದರಿಂದ ಅವನ ತಲೆಕೆಟ್ಟು ಹೋಯಿತು. ಫಾರೆಸ್ಟರ್‌ನ್ನು ವಿಚಾರಿಸಿದಾಗ ಅವನು ಮರಕಡಿಯಲು ಬಂದಿದ್ದರು, ಅದಕ್ಕೆ ಹೊಡೆಯಬೇಕಾಯಿತು ಎಂದು ಹೇಳಿದರು. ಆದರೆ ಈ ಜನರು ತಾವು ಬಿದಿರು ಕಡಿಯಲು ಮಾತ್ರ ಹೋಗಿದ್ದು ಮರ ಕಡಿಯುವುದಕ್ಕಲ್ಲ ಎಂದು ಹೇಳಿದರು ಕೇಳಲಿಲ್ಲ. ಈಗಲು ಆ ಕೇಸ್ ಕೋರ್ಟಿನಲ್ಲಿ ನಡೆಯುತ್ತಿದೆ. ಬೇರೆ ಜನರು ಲಕ್ಷಾಂತರ ರೂಪಾಯಿಯ ಮರಗಳನ್ನು ಕದ್ದು ಅಥವಾ ರಾಜರೋಷವಾಗಿ ಕಡಿಯುತ್ತಿರುವಾಗ ಅದರಿಂದಲೇ ಜೀವನ ಮಾಡುವ ಈ ಜನ ಬಿದಿರು ಕಡಿಯಲು ಹೋದರೆ ಹೊಡೆಯುವುದು ಎಲ್ಲಿಯ ನ್ಯಾಯ ಎಂದು ಆ ದೇವರೇ ಹೇಳಬೇಕು.

ಅದೇ ರೀತಿ ಎಷ್ಟೋ ವರ್ಷಗಳಿಂದ ಹೆಂಗಸರು ಕಾಡಿನಲ್ಲಿ ಸಿಗುವ ನೆಲ್ಲಿಕಾಯಿ, ಸೀಗೆಕಾಯಿ, ಜೇನು, ಮೇಣ ಮುಂತಾದವುಗಳನ್ನು ಸಂಗ್ರಹಿಸಿ ಮಾರಾಟ ಮಾಡಿ ಜೀವನ ನಡೆಸುತ್ತಾರೆ. ಇತ್ತೀಚೆಗೆ ಫಾರೆಸ್ಟರ್ ಹಾಗೂ ಗಾರ್ಡ್‌ಗಳ ಕಿರುಕುಳ ಜಾಸ್ತಿಯಾಗಿ ಅವರಿಗೆ ಕಾಡಿನ ಉತ್ಪನ್ನಗಳನ್ನು ಆಯ್ದುಕೊಳ್ಳಲು ಕಷ್ಟವಾಗುತ್ತಿದೆ. ಕಾಡನ್ನು ರಕ್ಷಿಸಲು, ಆನೆಗಳನ್ನು ಪಳಗಿಸಲು, ಕಾಳ್ಗಿಚ್ಚು ಆರಿಸಲು. ಗಿರಿಜನರು ಬೇಕು, ಆದರೆ ಕಾಡಿನ ಉತ್ಪನ್ನಗಳನ್ನು ತೆಗೆದುಕೊಳ್ಳಲು ಮಾತ್ರ ಅವರಿಗೆ ಅವಕಾಶವಿಲ್ಲ. ತೆಗೆದುಕೊಂಡರೆ ಕಳ್ಳರೆಂದು ಕರೆಯುತ್ತಾರೆ. ಇದ್ಯಾವ ನ್ಯಾಯ ಎಂದು ಮಹಿಳೆಯರು ಪ್ರಶ್ನಿಸುತ್ತಾರೆ. ಅಕಸ್ಮಾತ್ ಉತ್ಪನ್ನಗಳನ್ನು ಆಯಲು ಅವಕಾಶ ಕೊಟ್ಟರೆ ಅದರಲ್ಲಿ ಸ್ವಲ್ಪ ಭಾಗವನ್ನು ಗಾರ್ಡ್‌ಗಳಿಗೆ ಕೊಡಬೇಕು. ಹೀಗಾಗಿ ದಿನವೆಲ್ಲ ಸಂಗ್ರಹಿಸಿ ಮಾರಾಟ ಮಾಡಿದರೆ ಅವರಿಗೆ ಸಿಗುವುದು ಸ್ವಲ್ಪವೆ ಹಣ. ದಿನದಿಂದ ದಿನಕ್ಕೆ ಅದು ಸಿಗುವುದು ಕಷ್ಟವಾಗುತ್ತಿದ್ದ ಅವರ ಜೀವನ ದುಸ್ತರವಾಗುತ್ತಿದೆ.

ಈ ಎಲ್ಲಾ ಪ್ರಮುಖ ಸಮಸ್ಯೆಗಳಲ್ಲದೆ ಇತರ ವಿಷಯಗಳಿಗಾಗಿ ರೈತರೊಂದಿಗೆ ಮೇಲುವರ್ಗದವರೊಂದಿಗೆ ನ್ಯಾಯಕ್ಕಾಗಿ ಹೊಡೆದಾಡಬೇಕಾಗಿದೆ. ಗಿರಿಜನ ಹುಡುಗಿಯೊಬ್ಬಳು ಗೌಡರ ಮನೆಯಲ್ಲಿ ಜೀತಕ್ಕಿದ್ದಳು. ಗೌಡರ ಮಗನೊಡನೆ ಸ್ನೇಹ ಬೆಳೆದು ಅವಳು ಗರ್ಭಿಣಿಯಾದಳು. ಹುಡುಗ ಬೇರೆ ಊರಿಗೆ ಹೋಗಿ ಬರುತ್ತೇನೆ ಎಂದು ಹೇಳಿ ಹೋದವನು ಬರಲೇ ಇಲ್ಲ. ಹುಡುಗಿ ಕಡೆಯವರು ಪಂಚಾಯಿತಿ ಸೇರಿಸಿ ನ್ಯಾಯ ಕೇಳಿದಾಗ ಮದುವೆ ಮಾತ್ರ ಸಾಧ್ಯವಿಲ್ಲ, ಬೇಕಾದರೆ ಪರಿಹಾರ ಕೊಡುತ್ತೇವೆ ಎಂದು ಹೇಳಿದರು. ಆದರೆ ಹುಡುಗಿ ಒಪ್ಪಲಿಲ್ಲ. ಕೋರ್ಟಿಗೆ ಹೋದಳು, ಅಲ್ಲಿಯೂ ಒತ್ತಾಯದಿಂದ ಮದುವೆ ಮಾಡಲಾಗುವುದಿಲ್ಲ ಎಂದು ಹೇಳಿದರು. ಈಗ ಹುಡುಗಿ ಮಗುವಿನ ತಾಯಿಯಾಗಿದ್ದಾಳೆ. ಅವನು ತನಗೆ ಜೀವನ ನೀಡದಿದ್ದರೂ ಪರವಾಗಿಲ್ಲ ಅವನನ್ನೇ ಮದುವೆಯಾಗುವೆ ಎಂದು ಹೋರಾಟ ಮುಂದುವರೆಸಿದ್ದಾಳೆ. ತಾಯಿ ಮನೆಯಲ್ಲಿದ್ದುಕೊಂಡು ಮಗುವನ್ನು ಸಾಕುತ್ತಿದ್ದಾಳೆ.

ಹಾಡಿಯ ಕೆಲವು ಭಾಗಕ್ಕೆ ಬೇಲಿ ಹಾಕಿಕೊಂಡು ಅಲ್ಲಿಗೆ ಚಪ್ಪಲಿ ಹಾಕಿಕೊಂಡು ಹೋಗಬಾರದೆಂದು ತಮ್ಮದೆ ಒಂದು ನಂಬಿಕೆ ಆಚಾರವನ್ನು ಬೆಳೆಸಿಕೊಂಡಿರುತ್ತಾರೆ. ಅಂತಹ ಒಂದು ಜಾಗದಲ್ಲಿ ಹಳ್ಳಿಯವರು ರಸ್ತೆ ಮಾಡಲು ಮುಂದಾದರು. ಗಿರಿಜನರು ಅದನ್ನು ಪ್ರತಿಭಟಿಸಿದರು. ಪಂಚಾಯಿತಿ ಮಾಡಿ ಪುನಃ ಬೇಲಿ ಹಾಕಿದರು. ಕೋಪಗೊಂಡ ರೈತರು ಹಾಡಿಯಲ್ಲಿ ಗಂಡಸರಿಲ್ಲದ ಸಮಯ ನೋಡಿ ಗಿರಿಜನರ ಗುಡಿಸಲುಗಳಿಗೆ ಮುತ್ತಿಗೆ ಹಾಕಿದರು. ಈ ಪ್ರತಿಭಟನೆಯಲ್ಲಿ ಪ್ರಮುಖ ಪಾತ್ರವಹಿಸಿದ್ದ ಒಬ್ಬ ಮಹಿಳೆಯ ಮನೆಗೆ ನುಗ್ಗಿ ಅವಳಿಗೂ ಬಾಣಂತಿಯಾಗಿದ್ದ ಅವಳ ಮಗಳಿಗೂ ಚೆನ್ನಾಗಿ ಹೊಡೆದರು. ಮಗಳು ಆ ಏಟುಗಳಿಂದ ಈಗಲೂ ಚೇತರಿಸಿಕೊಂಡಿಲ್ಲ. ತಾಯಿಯು ತೀವ್ರವಾದ ಬೆನ್ನು ನೋವಿನಿಂದ ನರಳುತ್ತಿದ್ದಾಳೆ. ಅಷ್ಟೊತ್ತಿಗೆ ಗಂಡಸರು ಬಂದರೆ ಅವರಿಗೂ ಹೊಡೆದರು. ಸ್ವಯಂ ಸೇವಾ ಸಂಸ್ಥೆಯ ಸಹಾಯದಿಂದ ಗಾಯಗೊಂಡವರನ್ನು ಆಸ್ಪತ್ರೆಗೆ ಸೇರಿಸಿ ದೂರು ಕೊಡಲು ಪೊಲೀಸ್ ಠಾಣೆಗೆ ಹೋದರೆ ಅವರ ದೂರನ್ನು ತೆಗೆದುಕೊಳ್ಳದೆ ರೈತರು ಕೊಟ್ಟ ದೂರನ್ನು ತೆಗೆದುಕೊಂಡು ಗಿರಿಜನರ ಮೇಲೆ ಕೇಸ್ ಹಾಕಿದರು. ಈಗಲೂ ಪರಿಹಾರ ನ್ಯಾಯಕ್ಕಾಗಿ ಹೋರಾಡುತ್ತಿದ್ದಾರೆ. ಸರ್ಕಾರ ಗಿರಿಜನರ ಬಗ್ಗೆ ಎಷ್ಟೆಲ್ಲ ಮಾತನಾಡುತ್ತಿದ್ದರು ವಾಸ್ತವದಲ್ಲಿ ಯಾವ ಸಹಾಯವನ್ನು ಮಾಡುತ್ತಿಲ್ಲ ಎನ್ನುವುದೆ ಇವರ ದೂರು.

ಸರ್ಕಾರ ಗಿರಿಜನರಿಗಾಗಿ ಜಾರಿಗೆ ತರುವ ಕಾರ್ಯಕ್ರಮಗಳನ್ನು ಸರಿಯಾದ ರೀತಿಯಲ್ಲಿ ಪಡೆದುಕೊಳ್ಳಲು

(20ನೇ ಪುಟಕ್ಕೆ ಮುಂದುವರಿದಿದೆ)

# ದೀಪದ ಹುಡುಗಿ

ಚಿತ್ರಾ ಎಸ್.

ಊರು ಕೊಡೈಕಾನಲ್. ಕೊಡೈ ಬಂದಕೂಡಲೇ ಹಲ್ಲು ಕಿರಿಯುವ ಮುಖಗಳೆಷ್ಟೋ. ಇಲ್ಲಿನ ಹಸಿರು, ಚಾಚುವ ಬೆಟ್ಟಗುಡ್ಡಗಳು, ಸುಖವಾಗಿ ಸುಡುವ ಸೂರ್ಯ, ಮುಂಜಾವಿನ ಮುಸ್ಸಂಜೆಯ ಮಂಜು.... ಆಹಾ ಓಹೋ ಓಹೋ ಹೋ.... ಈ ಸುಡುಗಾಡು ಬೆಂಗಳೂರಿಂದ ಒಂದೆರಡು ದಿನಗಳ ಮಟ್ಟಿಗಾದರೂ ಅಲ್ಲಿಗೆ ಓಡಿಹೋಗಬೇಕೆನಿಸುತ್ತದೆ.

ಒಂದು ಸಂಜೆ ಗುಡ್ಡಗಳ ಕೆಳಗಿರುವ ಕೊಳವನ್ನು ಸುತ್ತಿಸುತ್ತಿ ಬಂದರೂ ನಾವು ತಂಗಿದ್ದ ಮನೆಯ ಗುರುತೇ ಸಿಗುತ್ತಿಲ್ಲ. ಸುತ್ತ ಎಲ್ಲಿ ನೋಡಿದರೂ ಎತ್ತರಕ್ಕೆ ಬೆಳೆದ ಪೈನ್ ಮರಗಳು, ಇನ್ನೇನೋ ಮರಗಳು. ಆ ಮರದಿಂದ ಈ ಮರಕ್ಕೆ ವ್ಯತ್ಯಾಸ ಕಂಡುಕೊಳ್ಳುವಷ್ಟು ಜಾಣೆಯರಲ್ಲ ನಾವು. ಯಾವು ಜನ್ಮದ (ಜನ್ಮ ಜನ್ಮದ) ಪಾಪವೋ ಬೆಂಗಳೂರಿನಂತಹ ನಗರದಲ್ಲಿ ಹುಟ್ಟಿ, ವಿದ್ಯಾಭ್ಯಾಸ ಮಾಡಿ ತೀರಾ ಅಜ್ಞಾನಿಗಳಾಗಿಬಿಟ್ಟಿದ್ದೇವೆ. ಸರಿ, ಈಗ ಮನೆ ಹುಡುಕಬೇಕಲ್ಲ. ಆಗಲೇ ಕತ್ತಲಾಗುತ್ತಿದೆ. ನಾಚಿಕೆ, ಅಳು ಎಲ್ಲ ಒಟ್ಟಾಗಿ ಮುತ್ತುತ್ತಿವೆ. ಹಾಂ ನೆನಪಾಯಿತು, ನಾವು ತಂಗಿದ್ದ ಮನೆ ಸ್ಟೈಲ್‌ಕಿಂಗ್ ರಜನಿಕಾಂತನ ಬಂಗಲೆಯೊ ಅಥವಾ ಸಾಯಿಬಾಬಾರ ಬಂಗಲೆಯ ಬಳಿಯೆಲ್ಲೋ ಇವೆ ಎಂದು. (ನಮ್ಮ ಬುದ್ಧಿಗಿಷ್ಟು)ಸಣ್ಣ ಎಣ್ಣೆ ದೀಪ ಹೊತ್ತ ಹುಡುಗಿಯೊಬ್ಬಳು ನಮ್ಮನ್ನು ದಾಟಿಹೋದಳು. ಅವಳು ತೊಟ್ಟ ಲಂಗದಾವಣಿ, ಕತ್ತಿಗೆ ಬಿಗಿದ ರೂಪಾಯಿ ಬೆಲೆಯ ಬಣ್ಣದ ಮಣಿ ಸರ, ಹವಾಯಿ ಚಪ್ಪಲಿ, ಕಣ್ಣುಗಳಿಗಿಂತ ದೊಡ್ಡದಾಗಿ ಬಳಿದ ಕಾಡಿಗೆ ಇವೆಲ್ಲ ನೋಡಿ ಇವಳು 'ಲೋಕಲ್' ಇರಬಹುದೆಂದು ಎಣಿಸಿ ನಾವು ತಂಗಿದ್ದ ಮನೆಯ ಒಡೆಯನ ಹೆಸರು ಹೇಳಿ ದಾರಿ ಕೇಳಿದೆವು. ಅವಳು ದೀಪವನ್ನು ಎತ್ತಿಹಿಡಿದು 'ಯಾವ ಊರಿನಿಂದ ಬಂದಿದ್ದೀರಿ' ಎಂದು ಕೇಳಿದ್ದಕ್ಕೆ ನಮ್ಮ ಕುಲಗೋತ್ರಗಳನ್ನು ತಿಳಿಸಿದೆವು. ಅವಳು 'ಬನ್ನಿ ಆ ಮನೆ ತೋರಿಸುತ್ತೇನೆ' ಎಂದು ಹೇಳಿದಾಗ ನೆಮ್ಮದಿಯಾಯಿತು. ಹವಾಯಿ ಚಪ್ಪಲಿಯ ಪಟಪಟ ಸದ್ದಿನ ಬ್ಯಾಕ್‌ಗ್ರೌಂಡ್‌ನಲ್ಲಿ ಮಾತಾಡುತ್ತ ನಡೆದವು.

ಆ ಹುಡುಗಿಯ ಹೆಸರು ನೆನಪಿಲ್ಲ. ಆಕೆ ಅದೇ ಊರಿನಲ್ಲಿ ಹುಟ್ಟಿ ಬೆಳೆದವಳು. ಅಜ್ಜಿ ಮುತ್ತಜ್ಜಿಯರ ಕಾಲದಿಂದಲೂ ಕೊಡೈಯೇ ಅವರ ಊರು. ಅಜ್ಜನಿಗೆ ಸಾಕಷ್ಟು ಜಮೀನಿತ್ತು, ಫಾರ್ಮ್, ಮರಸೇಬುಗಳ ತೋಟ ಮಾಡಿಕೊಂಡಿದ್ದ. ಹುಡುಗಿಯ ತಂದೆಗೆ ಕುಡಿತದ ದುಶ್ಚಟ. ಒಂದು ದಿನ ತನಗಿದ್ದ ಭೂಮಿಯನ್ನು ಚೆನ್ನೈನ ಉದ್ಯಮಿಗೆ ಮಾರಿಬಿಟ್ಟ. ಹುಡುಗಿಯ ಅಕ್ಕ ಬೇರೆ ಊರಿನಲ್ಲಿದ್ದಳು, ಅಣ್ಣನೊಬ್ಬ ಬಾಡಿಗೆ ಸೈಕಲ್ ಶಾಪ್‌ನ್ನು ನಡೆಸುತ್ತಿದ್ದ. ಈ ಹುಡುಗಿ ಮತ್ತು ಈಕೆಯ ತಾಯಿ ತನ್ನ ತಂದೆ ಮಾರಿದ್ದ ಜಮೀನಿನಲ್ಲಿ ಆ ಚೆನ್ನೈ ಸಾಹುಕಾರ ಕಟ್ಟಿಸಿರುವ ಬಂಗಲೆಯಲ್ಲಿ ಮನೆ ಮತ್ತು ತೋಟದ ಕೆಲಸಗಾರರಾಗಿ ದುಡಿಯುತ್ತಿದ್ದಾರೆ.

ಅವರವರ ಭಾವಕ್ಕೆ.... ಆತ ಮದರಾಸನ್ನು ಬಿಟ್ಟು ಈ ಊರಿಗೇ ಬಂದು ಒಬ್ಬನೇ; ಪಾಪ ಅವನಿಗೆ ಐಶ್ವರ್ಯ ಬಹಳ ಬೇಜಾರಾಗಿರಬೇಕು ಅಥವಾ ಅವರು ಕವಿಯೊ, ಹುಚ್ಚನೋ ಆಗಿರಬಹುದು ಎಂದು. ಹಂ ಹೂಂ ಯಾಕೆ ಎಂದು ಕೇಳುವಾಗಲೇ ಅವಳು Matter of fact ಎಂಬಂತೆ ಅವರು ಇಲ್ಲೇ ಇರಲ್ಲ, ವರ್ಷಕ್ಕೊಂದು ಸಲ ಸಂಸಾರದೊಂದಿಗೆ ಬರುತ್ತಾರೆ. ಸೀಜನ್‌ನಲ್ಲಿ ಅವರ ಮಕ್ಕಳು ತಮ್ಮ ಕಾಲೇಜ್ ಫ್ರೆಂಡ್ಸ್‌ಗಳೊಂದಿಗೆ ಒಂದೆರಡು ದಿನ ಮಜವಾಗಿರಲು ಬರುತ್ತಾರೆ. ಆಗೊಮ್ಮೆ ಈಗೊಮ್ಮೆ ನಮ್ಮ ಮಾಲೀಕರ ಆಫೀಸಿನಿಂದ ಯಾರಾದರೂ ನೋಡಿಕೊಂಡು ಹೋಗಲೆಂದು ಬರುತ್ತಾರೆ. ಅಷ್ಟೇ, ಮಿಕ್ಕೆಲ್ಲ ದಿನ ಈ ಬಂಗಲೆ ಖಾಲಿಯಾಗೇ ಇರುತ್ತೆ. ಹಾಗಿದ್ದಲ್ಲಿ ಇಲ್ಲಿ ಇವರಿಗೇನು ಕೆಲಸ ? ದಿನವೂ ಮನೆ ಸ್ವಚ್ಛಮಾಡುವುದು, ಅಡುಗೆ ಮನೆ ಬಚ್ಚಲು ತೊಳೆಯುವುದು, ಗಿಡಗಳಿಗೆ ನೀರು ಹಾಕುವುದು, ಗೊಬ್ಬರ ಹಾಕುವುದು, ಪಾತಿ ಮಾಡುವುದು, ಅವುಗಳನ್ನು ಆನೆ, ಕುದುರೆ, ಕೋಳಿ ಆಕಾರಗಳಿಗೆ ಕಟ್ ಮಾಡುವುದು ಹೀಗೇ ಕೆಲಸವಂತೆ.

ಮೇಲೆದ್ದ ಹುಬ್ಬುಗಳು ತೆರೆದಿದ್ದ ಬಾಯಿಗಳು ಸ್ವಸ್ಥಾನಕ್ಕೆ ಬರಲು ಕೆಲವು ನಿಮಿಷಗಳೇ ಬೇಕಾಯಿತು. ನಾವು ಎರಡು ದಿನ ಈ ಊರಿಗೆ ಬಂದು ಇರಲು ಸಾವಿರ ರೂಪಾಯಿ ಖರ್ಚು ಮಾಡಲು ನಾಲ್ಕು ತಿಂಗಳು (ತಿಂಗಳಿಗೆ ಇಷ್ಟು) ಕೂಡಿಹಾಕಿದ್ದ ದುಡ್ಡಲ್ಲಿ, ಈ ಸಾಹುಕಾರ ಮೋಜೆಲ್ಲಿ? ಬದುಕು ಚೆನ್ನೈನಲ್ಲಿ ಬೇಜಾರು ಕಳೆಯಲೆಂದೇ ಕೊಡೈನಲ್ಲಿ ಗುಡ್ಡ, ಕಾಡು, ಬಂಗಲೆ, ತೋಟ, ಆಳುಕಾಳು ಎಲ್ಲಾ ಕೊಂಡಿದ್ದಾನೆಯೇ? ಊರೊಳಗಿದ್ದ ಎಲ್ಲ ಬಂಗಲೆಗಳೂ, ಸ್ಟಾರ್ ಹೋಟೆಲ್‌ಗಳು, ಸಿನಿಮಾ ತಾರೆಯರದ್ದೋ, ಎಲ್ಲವನ್ನೂ ತ್ಯಜಿಸಿದ ಬಾಬಾಗಳದ್ದೋ ಆಗಿದ್ದವು. ಕೊಡೈನ ಲೋಕಲ್ ಜನ ಟೂರಿಸ್ಟ್ ಗೈಡ್ ಗಳಾಗಿಯೋ, ಪೆಟ್ಟಿಗೆ ಅಂಗಡಿ ಇಟ್ಟವರೋ, ಬಾಡಿಗೆ ಸೈಕಲ್ ಕೊಡುವವರೋ, ಟ್ಯಾಕ್ಸಿ ಓಡಿಸುವವರೋ, ಸ್ಟಾರ್

ಹೋಟೆಲ್‌ಗಳಲ್ಲಿ ಚಾಕರಿ ಮಾಡುವವರೋ, ಬಂಗಲೆ ಕೆಲಸಗಾರರೋ ಆಗಿರುವರು. ಕೆಲವೇ ಕೆಲವರು ದೊಡ್ಡ ಊರುಗಳ ದರೋಡೆಕೋರರ ಆಪ್ತಕಾರ್ಯದರ್ಶಿಗಳಾಗಿಯೂ ಕೆಲಸ ಮಾಡಿಕೊಂಡಿರುವವರು. ಬಡತನಕ್ಕೆ, ಖಯಾಲಿಗೋ ಬಿದ್ದು ಗುಡ್ಡಗುಡ್ಡಗಳನ್ನೇ ಚೀಪ್‌ರೇಟಿಗೆ ಮಾರಿರುವ ಮುಗ್ಧರು. ಅವನ್ನು 'ಇರಲಿ ಒಂದು ಇನ್‌ವೆಸ್ಟ್‌ಮೆಂಟ್' ಎಂದು ಮೇಲೆಬಿದ್ದು ಕೊಳ್ಳುವ ನಗರದ ಶ್ರೀಮಂತರು. ತಮ್ಮ ಊರಲ್ಲೇ ಪರಕೀಯರಾಗಿ ಕೂಲಿ ಮಾಡುವ ಈ ಜನ ಬೆಂಗಳೂರಿನ ನಮ್ಮಂಥವರಿಗಿಂತ ವಾಸಿ ಎನಿಸಲಿಲ್ಲ.

ಥೂ, ಇಂಡ್ಯಿಯಾದ ಸೀನೇ ಬದಲಾಗುತ್ತಿದೆ.

ಪಂಚತಾರಾ ಸೌಲಭ್ಯಗಳಿರುವ ಜಂಗಲ್ ಲಾಡ್ಜ್‌ಗಳು, ತೋಟದ ಮನೆಗಳು, ಕ್ಲಬ್ ರೆಸಾರ್ಟ್‌ಗಳು, ಡಿಸ್ನೆಸರ್ ಟೂರ್‌ಗಳು ಸಿರಿವಂತರನ್ನು ಇನ್‌ವೆಸ್ಟ್‌ಮೆಂಟ್‌ಗಳಾಗಿಯೂ Instalmentಗಳಲ್ಲಿ ಮಧ್ಯಮ ವರ್ಗದವರನ್ನೂ ಆಕರ್ಷಿಸುತ್ತಿವೆ. ಕೇರಳದ ವೈಖರಿಯ ಮರದ ಮೇಲಿನ ಮನೆಗಳು; ಜಸಿಲ್ಮೇರಿನ ಒಂಟೆ ಉತ್ಸವಗಳು, ಜನಪದ ಲೋಕದ 40 ರೂ. ದೋಸೆ, ರಷ್ಯಾದಲ್ಲಿ ಭಾರತವನ್ನು ಮೆರೆಸಿದ ಮಂಗನಿಯಾರ್ ಗಾಯಕ ಇನ್ನೂ ಜೋಧಪುರದ ಸ್ಲಂ ಒಂದರಲ್ಲಿ ವಾಸವಾಗಿರುವುದು, ನಾಗರಹೊಳೆಯ ಕಾಡಿನ ಜನ ತಾಜ್ ಹೋಟೆಲನ್ನು ಧಿಕ್ಕರಿಸುತ್ತಿರುವುದು..... ಯೋಚನೆ ಎತ್ತೆತ್ತಲೋ ಸಾಗುತ್ತಿದೆ.

ಪೈನ್ ಮರಗಳ ಎಲೆಗಳು ತಂಗಾಳಿ ಬೀಸಿದರೂ ಬೇರುಗಳು ಮಾತ್ರ ಬುಸುಗುಟ್ಟುತ್ತಿವೆಯೇನೋ ಎನಿಸುತ್ತದೆ. ದೀಪದ ಹುಡುಗಿಯ ಮುಖ ನೆನಪಿನಿಂದ ಮಾಸಿಲ್ಲ, ಹೆಸರು ಮರೆತು ಹೋಗಿದೆ. ಇನ್ನೆಷ್ಟೋ ಹೆಸರುಗಳು ಗೊತ್ತೇ ಇಲ್ಲ. ಕಾಂಕ್ರೀಟ್ ಕಾಡಿನಲ್ಲಿ ಕಳೆದುಹೋಗಿರುವ ನಮಗೆ ಕ್ಲಬ್ ಮೆಂಬರ್‌ಶಿಪ್ ಅನಿವಾರ್ಯವೇ?

●

---

*19ನೇ ಪುಟದಿಂದ ಮುಂದುವರಿದಿದೆ*

ಅವರು ಹೋರಾಟ ಮಾಡಬೇಕಾಗಿದೆ. ಒಮ್ಮೆ ಸರ್ಕಾರದವರು ಗಿರಿಜನರಿಗೆ ಮನೆ ಕಟ್ಟಿಸಿಕೊಡುತ್ತೇವೆ ಎಂದು ಹೇಳಿ ಗುತ್ತಿಗೆಯನ್ನು ಗುತ್ತಿಗೆದಾರನಿಗೆ ನೀಡಿತು. ಅವನು ಇಬ್ಬರು ವಾಸಿಸಲು ಯೋಗ್ಯವಲ್ಲದ ಒಂದು ಕೊಠಡಿಯ ಮನೆಗಳನ್ನು ಕಟ್ಟಿಸಲು ಪ್ರಾರಂಭಿಸಿದನು. ಆಗ ಸುಮಾರು 2000 ಮಹಿಳೆಯರು ಸ್ವಯಂ ಸೇವಾ ಸಂಸ್ಥೆಯ ಸಹಕಾರದಿಂದ B.D.O. ಕಛೇರಿಗೆ ಹೋಗಿ "ಮನೆ ಕಟ್ಟಿಸಿಕೊಡುವುದಾದರೆ ವಾಸಕ್ಕೆ ಯೋಗ್ಯವಾದಂತ ಮನೆಗಳನ್ನು ಕಟ್ಟಿಸಿಕೊಡಿ ಇಲ್ಲದಿದ್ದರೆ ನಮಗೆ ಸಾಮಾನುಗಳನ್ನು ಕೊಡಿ ನಾವೇ ಕಟ್ಟಿಕೊಳ್ಳುತ್ತೇವೆ" ಎಂದು ಗಲಾಟೆ ಮಾಡಿದರು. ಮಹಿಳೆಯರ ಈ ಹೋರಾಟ ಯಶಸ್ವಿಯಾಗಿ ತಮಗೆ ಅನುಕೂಲವಾಗುವಂತೆ ಅವರೆ ಮನೆ ಕಟ್ಟಿಕೊಂಡರು. 'ಕೂಲಿ ಮಾಡುವ ಹೆಂಗಸರಿಗೆ ಗಂಡಸರಿಗಿಂತ ಕಡಿಮೆ ಕೂಲಿ ಕೊಡುತ್ತಿದ್ದರು. ಹೆಚ್ಚು ಕೂಲಿ ಕೊಟ್ಟರೆ ಮಾತ್ರ ಕೆಲಸಕ್ಕೆ ಬರುತ್ತೇವೆ ಎಂದು ಹೋರಾಟ ಮಾಡಿ ಕೊನೆಗೆ ಹೆಂಗಸರಿಗೆ ದಿನಕ್ಕೆ 40 - 50 ರೂ. ಸಿಗುವಂತೆ ಮಾಡಿದರು. ಇನ್ನೊಂದು ಕಡೆ ಸರ್ಕಾರ ಕುಡಿಯುವ ನೀರಿಗಾಗಿ ಬೋರ್‌ವೆಲ್‌ನ್ನು ಹಾಕಿಸಿಕೊಟ್ಟಿತು. ಇತರ ಜನರು ಈ ಗಿರಿಜನರಿಗೆ ನೀರು ತೆಗೆದುಕೊಳ್ಳಲು ಬಿಡಲಿಲ್ಲ. ಅದಕ್ಕಾಗಿ ಹೋರಾಟ ಮಾಡಿ ನೀರನ್ನು ಪಡೆಯಬೇಕಾಯಿತು.

ಹೀಗೆ ಗಿರಿಜನರು ನಾನಾ ಕಡೆಯಿಂದ ಬರುವ ಹತ್ತು ಹಲವು ಸಮಸ್ಯೆ ತೊಂದರೆಗಳನ್ನ ಎದುರಿಸುತ್ತಾ ಪರಿಹಾರ ನ್ಯಾಯ ಪಡೆಯಲು ನಿರಂತರ ಹೋರಾಟ ಮಾಡುತ್ತಲೆ ಇದ್ದಾರೆ. ಈ ಹೋರಾಟಗಳಲ್ಲಿ ಮಹಿಳೆಯರು ಪ್ರಮುಖ ಪಾತ್ರ ವಹಿಸಿರುವುದು ಗಮನಾರ್ಹ ವಿಷಯ ಹಾಗೂ ಇವರನ್ನು ಸಂಘಟಿಸುವುದರಲ್ಲಿ ಸ್ವಯಂ ಸೇವಾ ಸಂಸ್ಥೆಗಳು ಮಹತ್ವದ ಪಾತ್ರವನ್ನು ವಹಿಸುತ್ತಿವೆ. ನಾನು ಎರಡು ದಿನಗಳಲ್ಲಿ ಅವರನ್ನು ಗಮನಿಸಿದ ಹಾಗೆ ಅವರು ಇಲ್ಲಿವರೆಗೆ ಇದ್ದ Seclusionನಿಂದ ಹೊರ ಬಂದಿದ್ದಾರೆ. ತಮ್ಮ ಸಮಸ್ಯೆಗಳಿಗೆ ತಾವೇ ಒಗ್ಗಟ್ಟಾಗಿ ಹೋರಾಡಬೇಕೆಂಬ ಅರಿವುಂಟಾಗಿದೆ. ಜನ, ಸರ್ಕಾರ ಅಧಿಕಾರಿಗಳು ಏನು ಹೇಳುತ್ತಾರೆ ಏನು ಮಾಡುತ್ತಾರೆ, ತಮಗೆ ಯಾವ ರೀತಿಯ ಸಹಾಯ ಮಾಡುತ್ತಾರೆ, ಎಲ್ಲಿ ಹೇಗೆ ಅನ್ಯಾಯ ಮಾಡುತ್ತಾರೆ, ತಾವು ಯಾಕೆ ಬೇರೆಯವರಿಗಿಂತ ಬೇರೆಯಾಗಿದ್ದೇವೆ, ಯಾವುದರಿಂದ ವಂಚಿತರಾಗಿದ್ದೇವೆ ಎಂದು ಚಿಂತಿಸಲು ಪ್ರಾರಂಭಿಸಿದ್ದಾರೆ. ಇದು ಖಂಡಿತ ಬೆಳವಣಿಗೆ, ಅಭಿವೃದ್ಧಿ, ಹಾಗೂ ಸಶಕ್ತತೆಯ ಸೂಚಿಯಾಗಿದೆ. ಆದರೆ ಈ ಚಿಂತನೆ ಸಮಗ್ರ ಹೋರಾಟವಾಗಿ ಪರಿವರ್ತನೆಗೊಂಡು ಯಶಸ್ವಿಯಾಗಿ ರೂಪುಗೊಳಿಸುವುದರಲ್ಲಿ ಗಿರಿಜನ, ಗಿರಿಜನ ಮಹಿಳೆಯರ, ಸಮಾಜದ, ಸರ್ಕಾರದ ಸ್ವಯಂ ಸೇವಾ ಸಂಸ್ಥೆಗಲ ಪಾತ್ರ ಏನು ಎಂಬುದು ಇನ್ನು ಸ್ಪಷ್ಟವಾಗಬೇಕಾಗಿದೆ.

**- ಹೇಮಲತ ಹೆಚ್. ಎಂ.**
ಮೈಸೂರು

# ಜಗತ್ತಿನ ನೊಬೆಲ್ ಪ್ರಶಸ್ತಿ ವಿಜೇತೆಯರು

ಪ್ರಪಂಚದ ಪ್ರತಿಷ್ಠಿತ ಪ್ರಶಸ್ತಿಗಳಲ್ಲೊಂದಾದ ನೊಬೆಲ್ ಪ್ರಶಸ್ತಿ 1901ರಲ್ಲಿ ಸೃಷ್ಟಿಯಾಯಿತು. ಅಂದಿನಿಂದ 1995ರ ವರೆಗೆ 634 ಮಂದಿ ಈ ಪ್ರಶಸ್ತಿಯನ್ನು ಗೆದ್ದಿದ್ದಾರೆ. ಇವರಲ್ಲಿ 28 ಮಂದಿ ಮಾತ್ರ ಮಹಿಳೆಯರು. ಇವರಲ್ಲಿ 12 ಮಂದಿ ಪ್ರಶಸ್ತಿಯನ್ನು ಪುರುಷರೊಂದಿಗೆ ಹಂಚಿಕೊಂಡಿದ್ದಾರೆ. ಸಾಹಿತ್ಯದಲ್ಲಿ 8 ಮಂದಿ ಪಡೆದರೆ, ಶಾಂತಿಗಾಗಿ 9 ಮಂದಿ ಪಡೆದಿದ್ದಾರೆ. ಆದರೆ ವಿಜ್ಞಾನದಲ್ಲಿ ಇವರ ಸಂಖ್ಯೆ ಕಡಿಮೆ. ಐವರು ವೈದ್ಯಶಾಸ್ತ್ರದಲ್ಲಿ ನಾಲ್ವರು ರಸಾಯನಶಾಸ್ತ್ರದಲ್ಲಿ, ಇಬ್ಬರು ಭೌತಶಾಸ್ತ್ರದಲ್ಲಿ ಪಡೆದಿದ್ದಾರೆ. ಆದರೆ ಅರ್ಥಶಾಸ್ತ್ರದಲ್ಲಿ ಮಾತ್ರ ಇದುವರೆಗೆ ಯಾವ ಮಹಿಳೆಯೂ ಪಡೆದಿಲ್ಲ.

ಶಾಂತಿಗಾಗಿ ಪಡೆದವರ ಒಟ್ಟು ಸಂಖ್ಯೆ 80. ಇವರಲ್ಲಿ 9 ಮಂದಿ ಮಹಿಳೆಯರು. ಇವರಲ್ಲಿ ಮೂವರು ಪುರುಷರೊಂದಿಗೆ ಹಂಚಿಕೊಂಡಿದ್ದಾರೆ. ಈ ಪಟ್ಟಿ ಹೀಗಿದೆ:

1905 - ಬರೋನೆಸ್ ಬರ್ಥಾವೊನ್ ಸುಟ್ನರ್ (ಆಸ್ಟ್ರಿಯಾ)

1931 - ಜೇನ್ ಆಡಮ್ಸ್ (ಯುಎಸ್ಎ) ನಿಕೊಲಾಸ್ ಮುರ್ರೆಒಟ್ಲರೊಂದಿಗೆ ಪ್ರಶಸ್ತಿಯನ್ನು ಹಂಚಿಕೊಂಡಿದ್ದಾರೆ.

1946 - ಎಮಿಲಿ ಗ್ರೀನ್‌ಬಲ್ಚ್ (ಯುಎಸ್ಎ) ಜಾನ್ ಆರ್. ಮೋಟ್‌ರವರೊಂದಿಗೆ ಹಂಚಿಕೊಂಡಿದ್ದಾರೆ.

1976 - ಮೈರೀಸ್ ಕಾರ್ರಿಗನ್ ಮತ್ತು ಬೆಟ್ಟಿ ವಿಲಿಯ್ಸಂ (ಯುನೈಟೆಡ್ ಕಿಂಗ್ಡಮ್) ಪ್ರಶಸ್ತಿಯನ್ನು ಹಂಚಿಕೊಂಡಿದ್ದಾರೆ.

1972 - ಮದರ್ ಥೆರೇಸಾ (ಭಾರತ)

1982 - ಆಳ್ವ ಮಿರ್ಡಲ್ (ಸ್ವೀಡನ್) ಆಲ್ಫನ್ಸೊಗಾರ್ಸಿಯಾ ರೊಬಲ್ಸ್‌ರೊಂದಿಗೆ ಹಂಚಿಕೊಂಡಿದ್ದಾರೆ.

1991 - ಆಂಗ್‌ಸ್ಯಾನ್ ಸೂಕ್ಕಿ (ಮಾನ್‌ಮಾರ್)

1992 - ರಿಗೊಬರ್ಟ್ ಮೆಂಚು (ಗಮಟಿಮಾಲಾ)

ಸಾಹಿತ್ಯದಲ್ಲಿ ಪಡೆದ 91 ಮಂದಿಯಲ್ಲಿ 8 ಮಂದಿ ಮಹಿಳೆಯರಾಗಿದ್ದಾರೆ. ಅವರೆಂದರೆ:

1909 - ಸೆಲ್ಮ ಲೇಗರ್‌ಲೇಫ್ (ಸ್ವೀಡನ್)

1926 - ಗ್ರೇಜಿಯಾ ಡೆಲೆಡ್ಡಾ (ಇಟಲಿ)

1928 - ಸಿಗ್ರಿಡ್ ಅಂಡ್ಸೆಟ್ (ನಾರ್ವೆ)

1938 - ಪರ್ಲ್ ಎಸ್. ಬಕ್ (ಯುಎಸ್ಎ)

1945 - ಗೇಬ್ರಿಲಾ ಮಿಸ್ಟ್ರಲ್ (ಚಿಲಿ)

1946 - ನೆಲ್ಲಿ ಸ್ಯಾಕ್ಸ್ (ಜರ್ಮನಿ) ಸ್ಯಾಮುಯೆಲ್ ವೈ. ಆಗ್‌ನನ್ನರೊಂದಿಗೆ ಹಂಚಿಕೊಂಡಿದ್ದಾರೆ.

1991 - ನಾಡೈನ್ ಗಾರ್ಡಿಮರ್ (ದಕ್ಷಿಣ ಆಫ್ರಿಕಾ)

1993 - ಟೋನಿ ಮೊರಿಸನ್ (ಯುಎಸ್ಎ)

ವೈದ್ಯ ವಿಜ್ಞಾನದಲ್ಲಿ ಈ ಪ್ರಶಸ್ತಿಯನ್ನು ಪಡೆದ ಒಟ್ಟು ಮಂದಿ 150. ಇವರಲ್ಲಿ ಐವರು ಮಹಿಳೆಯರು ಮಾತ್ರ. ಇವರಲ್ಲಿ ಕೂಡ ನಾಲ್ವರು ಪ್ರಶಸ್ತಿಯನ್ನು ಹಂಚಿಕೊಂಡವರು. ಅವರೆಂದರೆ:

1947 - ಗರ್ಟಿ ಟಿ. ಕೋರಿ (ಯುಎಸ್ಎ) ಕಾರ್ಲ್‌ಎಫ್‌ಕೋರಿ ಮತ್ತು ಬರ್ನಾರ್ಡೊ ಎ. ಹೊಸ್ಸೆಯವರೊಡನೆ ಹಂಚಿಕೊಂಡಿದ್ದಾರೆ.

1977 - ರೋಸಲಿನ್ ಯಾಲೊ (ಯುಎಸ್ಎ) ರೋಜರ್ ಚಾರ್ಲ್ಸ್ ಎಲ್‌ಗಿಲ್‌ಮಿನ್ ಮತ್ತು ಆಂಡ್ರ್ಯೂ ವಿ. ಶ್ಯಾಲಿ ಯವರೊಡನೆ ಹಂಚಿಕೊಂಡಿದ್ದಾರೆ.

1983 - ಬಾರ್ಬರಾ ಕ್ಲಿಂಟಿಕ್ (ಯುಎಸ್‌ಎ)

1986 - ರೀಟಾಲೆವಿ-ಮಾಂಟಲ್ಸಿನಿ (ಇಟಲಿ) ಸ್ಟ್ಯಾನ್ಲಿ ಕೊಹೆನ್‌ರವರೊಂದಿಗೆ ಹಂಚಿಕೊಂಡಿದ್ದಾರೆ.

1988 - ಗಟ್ರೂರ್ಡ್ ಬೆಲ್ಲೆ ಎಲಿಯನ್ (ಯುಎಸ್‌ಎ) ಜಾರ್ಜ್ ಹೆಚ್. ಹಿಚಿಂಗ್ಸ್ ಮತ್ತು ಸರ್‌ಜೇಮ್ಸ್ ಡಬ್ಲ್ಯು. ಬ್ಲ್ಯಾಕ್‌ರವರೊಂದಿಗೆ ಹಂಚಿಕೊಂಡಿದ್ದಾರೆ.

ರಸಾಯನಶಾಸ್ತ್ರದಲ್ಲಿ ನೊಬೆಲ್ ಪ್ರಶಸ್ತಿ ವಿಜೇತರ ಒಟ್ಟುಸಂಖ್ಯೆ 121. ಅವರಲ್ಲಿ ನಾಲ್ವರು ಮಹಿಳೆಯರು. ಇಬ್ಬರು ಇತರರೊಂದಿಗೆ ಹಂಚಿಕೊಂಡಿದ್ದಾರೆ. ಅವರು:

1911 - ಮೇರಿಕ್ಯೂರಿ (ಫ್ರಾನ್ಸ್)

1935 - ಐರೀನ್ ಜ್ಯೋಲಿಯಟ್-ಕ್ಯೂರಿ (ಫ್ರಾನ್ಸ್) ಫ್ರೆಡರಿಕ್ ಜೋಲಿಯಟ್ ಕ್ಯೂರಿಯವರೊಂದಿಗೆ ಹಂಚಿಕೊಂಡಿದ್ದಾರೆ.

1964 - ಡೊರೋಥಿ ಕ್ರೊಫುಡ್ ಹಾಕಿನ್ (ಯುನೈಟೆಡ್ ಕಿಂಗ್ಡಮ್)

1993 - ಕಾರಿ ಬಿ. ಮುಲ್ಲಿಸ್ (ಯುಎಸ್‌ಎ) ಮೈಕೇಲ್ ಸ್ಮಿತ್‌ರೊಂದಿಗೆ ಹಂಚಿಕೊಂಡಿದ್ದಾರೆ.

ಭೌತಶಾಸ್ತ್ರದಲ್ಲಿ ನೊಬೆಲ್ ಪ್ರಶಸ್ತಿ ಪಡೆದವರ ಒಟ್ಟು ಸಂಖ್ಯೆ 146. ಇವರಲ್ಲಿ ಇಬ್ಬರು ಮಾತ್ರ ಮಹಿಳೆಯರು. ಇವರಿಬ್ಬರರೂ ಪ್ರಶಸ್ತಿಯನ್ನು ಇತರರೊಂದಿಗೆ ಹಂಚಿಕೊಂಡಿದ್ದಾರೆ. ಅವರೆಂದರೆ :

1903 - ಮೇರಿ ಕ್ಯೂರಿ (ಫ್ರಾನ್ಸ್) ಪೈರಿ ಕ್ಯೂರಿ ಮತ್ತು ಹೆನ್ರಿ ಬೆಕೆರೆಲ್ಲರೊಂದಿಗೆ ಹಂಚಿಕೊಂಡಿದ್ದಾರೆ.

1963 - ಮರಿಯಾ ಗೋಪರ್ಟ್‌ರವರು ಮೇಯರ್ ಹ್ಯಾನ್ಸ್ ಡಿ ಜೆನ್‌ಸನ್ ಮತ್ತು ಯೂಜಿನ ಪಿ. ವಿಗ್ನರರೊಂದಿಗೆ ಹಂಚಿಕೊಂಡಿದ್ದಾರೆ.

ಮೂಲ : **ಸಿಗ್ಮನ್**, 1992
ಆಧಾರ : ಮಾನವ ಅಭಿವೃದ್ಧಿ ವರದಿ 1995
ಸಂಗ್ರಹ: ವೆಂ. ವನಜ, ಮೈಸೂರು

ಅಖಿಲ ಭಾರತೀಯ ಜನವಾದಿ ಮಹಿಳಾ ಸಮಿತಿಯು ನಡೆಸಿರುವ ಸಮೀಕ್ಷೆ ಪ್ರಕಾರ, ಕಳೆದ ಎಂಟು ವರ್ಷಗಳ ಬಿ.ಜೆ.ಪಿ. ಆಡಳಿತದಲ್ಲಿ ರಾಜಸ್ಥಾನ ರಾಜ್ಯದಲ್ಲಿ ಮಹಿಳೆಯರ ಮೇಲಣ ದೌರ್ಜನ್ಯಗಳು ಶೇ. 83ರಷ್ಟು ಹೆಚ್ಚಾಗಿವೆ. ಸರ್ಕಾರವೇ ಒದಗಿಸಿರುವ ಅಂಕಿ ಅಂಶಗಳಂತೆ 1991ರಲ್ಲಿ 1413 ಚುಡಾಯಿಸುವಿಕೆ ಪ್ರಕರಣಗಳಿದ್ದರೆ 1996ರಲ್ಲಿ ಈ ಸಂಖ್ಯೆ 2583 ಆಗಿದೆ; ಮಹಿಳೆಯರ ಮೇಲಣ ಅತ್ಯಾಚಾರದ ಪ್ರಕರಣಗಳ ಸಂಖ್ಯೆ 1991ರಲ್ಲಿ 1162 ಇದ್ದದ್ದು 1996ರಲ್ಲಿ 2162 ಪ್ರಕರಣಗಳು ದಾಖಲಾಗಿವೆ. ವರದಕ್ಷಿಣೆ ಪ್ರಕರಣಗಳ ಸಂಖ್ಯೆ 1996ರ ಒಂದು ವರ್ಷದಲ್ಲಿ 3430 ದಾಖಲಾಗಿವೆ.

* * *

ಪಂಜಾಬಿನ ಪಟಿಯಾಲಾದಲ್ಲಿ ಭೂಸೇನೆಯ ಮೇಜರ್ ಈಶ್ವರ ಪಾಲ್ ಅವರು ಹೊಸದಾಗಿ ನೇಮಕಗೊಂಡ ಮಹಿಳಾ ಅಧಿಕಾರಿಯೊಬ್ಬರ ಶೀಲಭಂಗ ಮಾಡಿದ ಆಪಾದನೆಯ ವಿಚಾರಣೆಯನ್ನು ಜನರಲ್ ಕೋರ್ಟ್ ಮಾರ್ಷಲ್ ನಡೆಸಿತು. ಕಳೆದ ವರ್ಷದ ಆಗಸ್ಟ್ 14ರಂದು ಮಹಿಳಾ ಅಧಿಕಾರಿಯ ಶೀಲಭಂಗವನ್ನು ಮೇಜರ್ ಈಶ್ವರ ಪಾಲ್ ಮಾಡಿದ್ದು ಸಿದ್ಧವಾಯಿತು. ಇದಕ್ಕಾಗಿ ಮೇಜರ್ ಈಶ್ವರ ಪಾಲ್‌ರನ್ನು ಭೂಸೇನೆಯಿಂದ ಡಿಸ್‌ಮಿಸ್ ಮಾಡಲಾಗಿದೆ.

*ಸಂಗ್ರಹ : ಶಾರದ*

# ಮಾನಸ ವಿಶೇಷ ಸಂಚಿಕೆ ಬಿಡುಗಡೆ

ಆಗಸ್ಟ್ ಆರು ಹಾಗೂ ಒಂಬತ್ತು ಜಪಾನ್‌ನ ಹಿರೋಶಿಮಾ ಮತ್ತು ನಾಗಸಾಕಿಯ ಮೇಲೆ ಅಣುಬಾಂಬ್ ಹಾಕಿದ ದಿನ. ಅಣುಬಾಂಬ್ ಸ್ಫೋಟದಿಂದ ಮಾನವ ಜನಾಂಗವನ್ನು ನಾಶಮಾಡಿದ್ದ ನಿದರ್ಶನದ ನೆನಪಿನ ದಿನ. ರಾಜಕೀಯ ಅಧಿಕಾರ ಮೂರ್ಖರ ಕೈಯಲ್ಲಿ ಕೇಂದ್ರೀಕೃತವಾದರೆ ಉಂಟಾಗುವ ಅನಾಹುತವನ್ನು ಜಗತ್ತಿನ ಜನರಿಗೆ ನೆನಪಿಸುವ ದಿನ. ಭಾರತದ ಪೋಕ್ರಾನ್‌ನಲ್ಲಿ ನಡೆಸಲಾದ ಬಾಂಬ್‌ಸ್ಫೋಟದ ಪ್ರತಿಭಟನೆಯ ಸಂಕೇತವಾಗಿ ಮಾನಸ ವಿಶೇಷ ಸಂಚಿಕೆಯನ್ನು ಹೊರತಂದಿದೆ. ದಿನಾಂಕ 12-9-98ರಂದು ಮಾನಸ ವಿಶೇಷ ಸೂಚಿಯ ಬಿಡುಗಡೆಯ ಹಾಗೂ 'ನ್ಯೂಕ್ಲಿಯರ್ ಇಂಡಿಯಾ' ಚಲನ ಚಿತ್ರ ಪ್ರದರ್ಶನ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಅಣುವಿಜ್ಞಾನಿಯಾದ ಡಾ. ಭಾನು ಪ್ರತಾಪ್‌ದಾಸ್ ಗುಪ್ತಾರವರು ವಿಶೇಷ ಸಂಚಿಕೆಯನ್ನು ಬಿಡುಗಡೆ ಮಾಡುತ್ತಾ ಭಾರತದಲ್ಲಿ ಅಣುಶಕ್ತಿ ಕಾರ್ಯಕ್ರಮಗಳು ಕೇವಲ ಶಾಂತಿ ಅಥವಾ ಅಭಿವೃದ್ಧಿ ಕಾರ್ಯಗಳಿಗಾಗಿ ಮಾತ್ರ ಸೀಮಿತವಾಗಿಲ್ಲ. ಅಣುಶಕ್ತಿಯ ಕಾರ್ಯಕ್ರಮಗಳನ್ನು ಮಿಲಿಟರಿ ಉದ್ದೇಶಕ್ಕಾಗಿ ಹಮ್ಮಿಕೊಳ್ಳಲಾಗಿದೆಯೆಂದರು. ವಿದ್ಯುತ್ ಉತ್ಪಾದನೆಗೆ ಥೋರಿಯಂನ್ನು ಯುರೇನಿಯಂನಿಂದ ಬೇರ್ಪಡಿಸುವ ಅಗತ್ಯವಿಲ್ಲವೆಂಬುದನ್ನು ವಿವರಿಸುತ್ತಾ, ಯುರೇನಿಯಂನಿಂದ ಥೋರಿಯಂ ಅನ್ನು ಬೇರ್ಪಡಿಸುವುದು ಸಂಕೀರ್ಣವಾದುದರ ಜೊತೆಗೆ ಹೆಚ್ಚು ದುಬಾರಿಯಾದುದು. ಹೀಗೆ ಬೇರ್ಪಡಿಸುವ ಪ್ರಕ್ರಿಯೆ ಅಣ್ವಸ್ತ್ರಗಳ ತಯಾರಿಕೆಗೆ ಅತ್ಯಗತ್ಯವಾದುದೆಂದರು. ಮೈಸೂರಿನ ರತ್ನಹಳ್ಳಿಯಲ್ಲಿ ಯುರೇನಿಯಂನಿಂದ ಥೋರಿಯಂನ್ನು ಬೇರ್ಪಡಿಸುವ ಕೆಲಸ ನಡೆದಿದ್ದು ಅದು ಮಿಲಿಟರಿ ಉದ್ದೇಶಕ್ಕಾಗಿಯೇ ಎಂದು ನುಡಿದರು.

ಮಾನಸ ವಿಶೇಷ ಸಂಚಿಕೆಯನ್ನು ಕುರಿತು ಮಾತನಾಡಿದ ಖ್ಯಾತ ಪತ್ರಕರ್ತ ನಾಗೇಶ್ ಹೆಗಡೆಯವರು ಮಾನಸ ಇದುವರೆಗೆ ಅಣಶಕ್ತಿಯ ಬಗ್ಗೆ ಯಾರೂ ಮಾಡದ ಪ್ರಯತ್ನವನ್ನು ಮಾನಸ ಮಾಡಿದೆಯೆಂದು ಮೆಚ್ಚುತ್ತಾ, ಮಾನಸದಲ್ಲಿ ದಾಖಲಾದ ಹಿರೋಶಿಮಾ ಹಾಗೂ ನಾಗಸಾಕಿಯ ದುರಂತದಲ್ಲಿ ನೊಂದವರ ನೋವನ್ನು ಬಿಡಿಸಿ ವಿವರಿಸಿದರು. ಕರ್ನಾಟಕದಲ್ಲಿ ಪರಿಸರದ ಉಳುವಿಗಾಗಿ ತನ್ನ ಜೀವನವನ್ನೇ ಮುಡುಪಾಗಿಟ್ಟ ಕುಸುಮಾ ಸೊರಬಾರವರನ್ನು ಕುರಿತು ಬರಹವಿರ ಬೇಕಿತ್ತೆಂದರು.

'ನ್ಯೂಕ್ಲಿಯರ್ ಇಂಡಿಯಾ' ಸಿನೆಮಾವನ್ನು ಅಂದು ತೋರಿಸಲಾಯಿತು. ಕೇರಳ, ಮೈಸೂರು ಹಾಗೂ ಇತರ ಆರು ನ್ಯೂಕ್ಲಿಯರ್ ಪ್ಲ್ಯಾಂಟ್‌ಗಳಲ್ಲಿ ನಡೆಯುವ ನ್ಯೂಕ್ಲಿಯರ್ ಚಟುವಟಿಕೆಗಳ ಮೇಲೆ ಸಿನೆಮಾ ಬೆಳಕು ಚೆಲ್ಲುತ್ತದೆ. ಈ ಎಲ್ಲಾ ಪ್ಲ್ಯಾಂಟ್‌ಗಳಲ್ಲಿ ಸುರಕ್ಷಣಾ ವಿಧಾನಗಳು ಇಲ್ಲದಿರುವುದರಿಂದ ಸುತ್ತ-ಮುತ್ತ ಬದುಕುವ ಹಾಗೂ ಕಾರ್ಖಾನೆಯ ಒಳಗೆ ಕೆಲಸಮಾಡುವ ಜನರ ಬದುಕು ಅಸಹನೀಯವಾಗಿದೆ. ದೈಹಿಕ ನ್ಯೂನತೆ, ಕ್ಯಾನ್ಸರ್ ಇವು ಈ ಪ್ರದೇಶಗಳ ಸುತ್ತ-ಮುತ್ತ ಬದುಕುವ ಜನರಲ್ಲಿ ಕಂಡುಬರುವ ಸಾಮಾನ್ಯ ಅಂಶಗಳಾಗಿವೆ. ಆದಾಗ್ಯೂ ಸಹ ಆರೋಗ್ಯಕ್ಕೆ ಸಂಬಂಧಿಸಿದಂತೆ ಯಾವುದೇ ರಕ್ಷಣಾ ವಿಧಾನಗಳನ್ನು ಅಳವಡಿಸಲಾಗುತ್ತಿಲ್ಲ. 'ಶಾಂತಿಯುತ' ಹೆಸರಿನಲ್ಲಿ ಸ್ಥಾಪಿಸಲ್ಪಡುವ ಈ ಅಣು ಕೇಂದ್ರಗಳು ಕ್ರಮೇಣವಾಗಿ ಜನರ ಬದುಕುವ ಹಕ್ಕುಗಳನ್ನು ಕಸಿದುಕೊಳ್ಳತೊಡಗಿವೆ ಎಂಬುದರ ಮೇಲೆ ಈ ಸಿನೆಮಾ ಬೆಳಕು ಚೆಲ್ಲುತ್ತದೆ.

ಚಲನಚಿತ್ರ ಪ್ರದರ್ಶದ ನಂತರ ರತ್ನಹಳ್ಳಿಯಲ್ಲಿ ವಾಸಿಸುವ ಜನರ ಆರೋಗ್ಯ ಪರಿಸ್ಥಿತಿಯನ್ನು ಕುರಿತು ವೈಜ್ಞಾನಿಕ ಸಮೀಕ್ಷೆ ನಡೆಸುವ ಬಗ್ಗೆ ಸಭೆಯಲ್ಲಿ ಚರ್ಚಿಸಲಾಯಿತು. ಚಂಪಾವತಿ ಹೆಚ್. ಎಸ್. ರವರು ಸ್ವಾಗತಿಸಿದರು. ಸರಸ್ವತಿಯವರು ವಂದನಾರ್ಪಣೆ ಸಲ್ಲಿಸಿದರು.

●

*ಈ ವಿಶೇಷ ಸಂಚಿಕೆಗೆ ಮೆಟೀರಿಯಲ್ಸ್ ನೀಡಿ ಸಹಕರಿಸಿದ ವಿಮೋಚನಾ ಮಹಿಳಾ ಹಕ್ಕುಗಳ ವೇದಿಕೆಯನ್ನು ಮಾನಸ ಕೃತಜ್ಞತೆಯಿಂದ ನೆನೆಯುತ್ತದೆ.*

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವಾಯತ್ತ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 75 ರೂ**

ಸಂ. ಮಂಡಳಿ

REGD No. KRNA 271

BOOK-POST
PRINTED MATTER

ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067